ಶ್ರೀ

# ಮೀರಾಬಾಯಿ.



ಲೇಖಕ: —

ಎಚ್. ವೆಂಕಟರಾಮಯ್ಯ.



1929

ಬೆಲೆ ೪ ಆಣೆಗಳು.

# ಮೀರಾಬಾಯಿ.



ಲೇಖಕ:—

ಎಸ್, ವೆಂಕಟರಾಮಯ್ಯ

ಕ್ಲಾರ್ಕ ಪೋಸ್ಟ್, ಆಫೀಸ, ದೊಡ್ಡಬಳ್ಳಾಪುರ.



ಪ್ರಕಾಶಕ:—

ನಾರಾಯಣ. ಬಿ. ಕುಲಕರ್ಣಿ,

ಸಂಪಾದಕ, ಸ. ಚ., ಆನಂದವನ.



1927

ಬೆಲೆ ೪ ಆಣೆ.

# ಮೀರಾಬಾಯಿ.

## (೧)

ಮೇಡತಾ ನಗರವು ರಾಜಸ್ಥಾನದಲ್ಲಿ ಓರ್ವ ಸಾಮಂತರಾಜನ ರಾಜಧಾನಿಯು; ಬಾಪ್ಪಾರಾವಲನು ಮಹಾಪರಾಕ್ರಮಶಾಲಿ; ಆತನು ಮೇಲಾದ ವಿಷ್ಣುಭಕ್ತ. ಅರಮನೆಯಲ್ಲಿಯೇ ಸುಂದರವಾದ ಗೋವಿಂದಮೂರ್ತಿಯ ಮಂದಿರ; ಆ ಮಂದಿರವು ಅರಮನೆಯ ವೈಭವದ ಸಾರವಾಗಿತ್ತು. ಈ ದಿನ ಆ ಮಂದಿರದಲ್ಲಿ ಭಕ್ತಜನಸ್ತೋಮವು ಇಮ್ಮಡಿಸಿತ್ತು. ಓರ್ವ ಸುಂದರಬಾಲಿಕೆಯು ಗೋವಿಂದಮೂರ್ತಿಯ ಸಮ್ಮುಖದಲ್ಲಿ ನಿಂತು ಸುಸ್ವರಕಂಠದಿಂದ ಭಗವನ್ನಾಮಗಾನ ಮಾಡುತ್ತಿದ್ದಳು. ಆಕೆಯ ಚಿತ್ತವೆಲ್ಲ ಗೋವಿಂದನ ಚರಣಗಳಲ್ಲಿಯೇ ಲೀನವಾಗಿತ್ತು. ಆಕೆಯ ಕಮಲನಯನಗಳಿಂದ ಆನಂದಾಶ್ರುಗಳು ತಮ್ಮಷ್ಟಕ್ಕೆ ತಾವೇ ಧಾರೆಗಟ್ಟಿ ಸುರಿಯುತ್ತಿದ್ದವು. ಎಲ್ಲರೂ ಆ ಬಾಲಿಕೆಯ ಭಕ್ತಿರಸಪೂರಿತವಾದ ಆ ಗಾನಶ್ರವಣದಲ್ಲಿಯೇ ತಲ್ಲೀನರಾಗಿದ್ದಾರೆ.

ಬಾಲಿಕೆಯು ಅನುಪಮಸುಂದರಿ. ಆಕೆಯ ಸೌಂದರ್ಯವನ್ನು ಸರಿಗಟ್ಟುವವರು ರಾಜಸ್ಥಾನದಲ್ಲಿ ಯಾರೂ ಇರಲಿಲ್ಲ. ಭಕ್ತಿಯ ಉಜ್ವಲತೇಜಸ್ಸು ಆ ಸುಂದರವದನದಲ್ಲಿ ಪ್ರತಿಬಿಂಬಿತವಾಗಿತ್ತು. ಆ ಸೌಂದರ್ಯವು ಅಪ್ಸರೆಯರನ್ನೂ ನಾಚಿಸುತ್ತಿತ್ತು. ಆ ಪವಿತ್ರ ಸ್ಥಾನ, ಗಂಧರ್ವಗಾನವನ್ನೂ ಹೀಯಾಳಿಸುವ ಆ ಮೃದುಮಧುರ ಕಂಠಸ್ವರ, ಬಾಲಿಕೆಯ ಮುಖಮಂಡಲದಲ್ಲಿ ಪ್ರಕಟವಾಗುತ್ತಿರುವ ಅನನ್ಯಭಕ್ತಿ, ಇವುಗಳಿಂದ ಉತ್ಪನ್ನವಾದ ಅಪೂರ್ವವಾದುದೊಂದು ತೇಜೋರಾಶಿಯು ಸರ್ವರ ಮೇಲೂ ನಿರಂಕುಶಾಧಿಪತ್ಯ ಮಾಡುತ್ತಿತ್ತು.

ಬಾಲಿಕೆಯು ಮೇಡತಾನಗರಾಧಿಪತಿಯ ಪುತ್ರಿಯಾದ ಮೀರಾಬಾಯಿ; ಮೀರೆಯು ಪ್ರತಿದಿನವೂ ಶ್ರೀಗೋವಿಂದಮೂರ್ತಿಯ ಸನ್ಮುಖದಲ್ಲಿ ಭಜನೆ ಮಾಡುತ್ತಿದ್ದಳು. ಈ ದಿನವೂ ಪದ್ಧತಿಯ ಮೇರೆಗೆ ಭಜನಾಸಕ್ತಳಾಗಿದ್ದಾಳೆ. ಕೆಲಹೊತ್ತಿನ ಮೇಲೆ ಭಜನೆಯು ಮುಗಿಯಿತು. ಎಲ್ಲರೂ ಪ್ರಸಾದ ಸ್ವೀಕಾರಮಾಡಿ ತಮ್ಮ ತಮ್ಮ ಮನೆಗಳಿಗೆ ಹೊರಟರು. ಆದರೆ

ಒಬ್ಬ ಯುವಕನು ಮಾತ್ರ ನಿಂತಲ್ಲಿಯೇ ನಿಂತು ಪದ ಚಲನೆ ಮಾಡದೆ ಅತೃಪ್ತನಯನಗಳಿಂದ ಬಾಲಿಕೆಯನ್ನು ನೋಡುತ್ತಿದ್ದನು.

ಭಜನೆ ನಡೆದಾಗ ಮೀರೆಯು ಗೋವಿಂದನ ಸನ್ಮುಖದಲ್ಲಿ ಸ್ವಾಮಿಯ ಸ್ವರೂಪಾನುಸಂಧಾನದಲ್ಲಿಯೇ ನಿಂತು ಬಾಹ್ಯಪ್ರಪಂಚಜ್ಞಾನಶೂನ್ಯಳಾಗಿದ್ದಳಾದುದರಿಂದ ಯಾರು ಯಾರು ಬಂದಿದ್ದಾರೆ? ಎಲ್ಲೆಲ್ಲ ನಿಂತಿದ್ದಾರೆ? ಎಂಬ ಮುಂತಾದ ವಿಚಾರಗಳಿಗೆ ಆಕೆಗೆ ಅವಕಾಶವೇ ಇರಲಿಲ್ಲ. ಪರಮಾತ್ಮನೊಡನೆ ಕೇವಲ ಭಾವರಾಜ್ಯದಲ್ಲಿ ವಿಹರಿಸುತ್ತಿದ್ದಳು. ಗೋವಿಂದನ ಚರಣಗಳಲ್ಲದೆ ಮತ್ತಾವದೂ ಆಕೆಯ ಭಾವನೆಯಲ್ಲಿರಲೇ ಇಲ್ಲ. ಸರ್ವವೂ ಗೋವಿಂದಮಯವೇ ಆಗಿದ್ದಿತು.

ಭಜನೆಯು ಮುಗಿಯುತ್ತಲೇ ಮೀರೆಯು ಪುನಃ ಬಾಹ್ಯಪ್ರಪಂಚಕ್ಕೆ ಬಂದಳು. ಅದರೊಂದಿಗೆ ಲಜ್ಜೆಯೇ ಮೊದಲಾದ ದೇಹಜನ್ಯವಿಕಾರಗಳೂ ಅವಳನ್ನನುಸರಿಸಿದವು.

ಮೀರೆಯು ಹಿಂದಿರುಗಿ ನಾಲ್ಕೂಕಡೆಗೆ ನೋಡಿದಳು. ಯುವಕನೊಬ್ಬನು ತನ್ನನ್ನೇ ಅನಿಮಿಷ ನೇತ್ರಗಳಿಂದ ನೋಡುತ್ತಿದ್ದಾನೆ! ಪ್ರಶಸ್ತ ಲಲಾಟ, ಉಜ್ವಲನೇತ್ರ ಇವುಗಳಿಂದ ಕೂಡಿದ ಗೌರಕಾಯನಾಗಿ ಮನ್ಮಥ ಸದೃಶನಾಗಿದ್ದಾನೆ! ಆತನ ಮನಮೋಹನ ರೂಪವು ವಿಧಾತನ ಸೃಷ್ಟಿರಚನಾ ಕೌಶಲ್ಯವನ್ನು ಹೊಗಳುತ್ತಿತ್ತೆಂದರೆ ಸಾಕು. ಒಂದಾವೃತ್ತಿ ನೋಡಿದಳು ಮಾತ್ರ! ಲಜ್ಜಾಭರದಿಂದ ಮುಖತಗ್ಗಿಸಿದಳು! ಆಕೆಯ ನೇತ್ರಗಳಿಗೆ ಪುನಃ ಆ ರೂಪವನ್ನು ನೋಡಲು ಶಕ್ತಿಸಾಲದೆ ಹೋಯಿತು.

ಶ್ರೀ ಗೋವಿಂದಮಂದಿರಕ್ಕೆ ಬಂದ ಅತಿಥಿಗಳ ಸತ್ಕಾರಭಾರವು ಮೀರೆಯ ಮೇಲಿತ್ತು. ಸಾಧುಸಂತರು ಯಾರೇ ಬರಲಿ ಅವರ ಭೋಜನಾದಿಗಳ ವ್ಯವಸ್ಥೆಯನ್ನೂ, ಅವರ ಆದರಾತಿಥ್ಯಗಳನ್ನೂ ಆ ರಾಜನಂದಿನಿಯೇ ದಾಸಿಯರಿಂದ ಮಾಡಿಸುತ್ತಿದ್ದಳು. ಆದರೆ ಈ ದಿನ ಈ ಯುವಕನನ್ನು ಮಾತನಾಡಿಸಲು ಶಕ್ತಳಾಗಲಿಲ್ಲ. ಆತನನ್ನು ದೃಷ್ಟಿಸಿ ನೋಡುವುದಕ್ಕೂ ಸಹ ಸಂಕೋಚಭಾವವನ್ನು ತಾಳಿದಳು.

ಮೀರೆಯು ತನ್ನ ಸಖಿಯೊಬ್ಬಳನ್ನು ಕುರಿತು ಹೇಳಿದಳು. "ಹೋಗು ಆ ಯುವಕನನ್ನು ಈ ದಿನ ಇಲ್ಲಿ ಆತಿಥ್ಯ ಸ್ವೀಕಾರ ಮಾಡುವಂತೆ ಪ್ರಾರ್ಥಿಸು, ಆತನು ಸಾಮಾನ್ಯ ಮನುಷ್ಯನಂತೆ ಕಾಣುವುದಿಲ್ಲ, ರಾಜಪುತ್ರನೇ

ಛದ್ಮವೇಷಧಾರಿಯಾಗಿ ಬಂದಿರುವನೆಂದು ತೋರುತ್ತದೆ. ಯಾರೇ ಆಗಲಿ ಶ್ರೀ ಗೋವಿಂದನ ಮಂದಿರಕ್ಕೆ ಬಂದ ಅತಿಥಿಗಳ ಸತ್ಕಾರ ಮಾಡುವದು ನಮ್ಮ ಕರ್ತವ್ಯವಷ್ಟೆ;'' ಅದನ್ನು ಕೇಳಿ ಸಖಿಯು ರಾಜನಿರಲಿ, ಭಿಕಾರಿಯಿರಲಿ ನಮ್ಮ ದೃಷ್ಟಿಯಲ್ಲಿ ಎಲ್ಲರೂ ಒಂದೇ. ಸರ್ವರೂ ನರನಾರಾಯಣ ಸ್ವರೂಪರೇ. ಹೀಗಿದ್ದು ಈ ದಿನ ತಾವು ಇಷ್ಟೇಕೆ ಲಜ್ಜೆ ಪಡುವಿರಿ? ಯುವಕನಾರು?

ಮೀರಾ—ತಿಳಿಯದು.

ಸಖಿ—ತಿಳಿಯದಿದ್ದರೆ ಲಜ್ಜೆಯೇಕೆ?

ಮೀರೆಯಿಂದ ಉತ್ತರಕೊಡಲಾಗಲಿಲ್ಲ. ಲಜ್ಜೆಯಿಂದ ತಲೆಯನ್ನು ಸಹ ಮೇಲಕ್ಕೆತ್ತದೆ "ನೀನು ಹೋಗು'' ಎಂದು ಇಷ್ಟೇ ನುಡಿದಳು.

ಸಖಿಯು ಯುವಕನ ಸಮೀಪಕ್ಕೆ ಹೋಗಿ "ಶ್ರೀಮಾನ್! ನಮ್ಮ ರಾಜಕುವರಿಯು ಈ ದಿನ ಆತಿಥ್ಯ ಸ್ವೀಕರಿಸಲು ತಮ್ಮನ್ನು ಪ್ರಾರ್ಥಿಸುತ್ತಾಳೆ. ನಮ್ಮ ಈ ಪ್ರಾರ್ಥನೆಯನ್ನು ತಾವು ಅಂಗೀಕರಿಸಿದರೆ ನಾವು ಧನ್ಯರು.''

ಯುವಕ—ಭದ್ರೇ, ರಾಜನಂದಿನಿಯು ಪ್ರಾರ್ಥನೆಯನ್ನು ಆಕೆಯ ಮುಖದಿಂದಲೇ ಕೇಳಬೇಕೆಂದು ಅಪೇಕ್ಷಿಸುತ್ತೇನೆ.

ಉಪಾಯಾಂತರ ತೋರದೆ ಲಜ್ಜಾವನತಮುಖಿಯಾಗಿ ಮೀರೆಯೇ ಯುವಕನ ಸಮೀಪಸ್ಥಳಾಗಿ ಪ್ರಾರ್ಥಿಸಿದಳು.

ಆತನಿಗೂ ಇದೇ ಬೇಕಾಗಿತ್ತು. ಮೀರಾಬಾಯಿಯ ಗಾನವನ್ನು ಕೇಳಬೇಕೆಂತಲೇ ಆತನು ಬಹು ದೂರದಿಂದ ಬಂದಿದ್ದನು. ಆಕೆಯ ಮೃದು ಮಧುರ ಗಾನದಿಂದ ಆತನ ಅತೃಪ್ತತೆಯು ಹೆಚ್ಚಾಗಿ ಆತನು ಮುಗ್ಧನಾಗಿದ್ದನು. ಭಗವಂತನನ್ನೇ ಬರಮಾಡಿಕೊಳ್ಳುವಂಥ ಪ್ರೇಮರಸ ಪೂರಿತ ಗಾನಕ್ಕೆ ಯಾರು ಮೆಚ್ಚಲಿಕ್ಕಿಲ್ಲ!

---

## (೨)

ಸಂಧ್ಯಾಕಾಲದಲ್ಲಿ ಶ್ರೀ ಗೋವಿಂದಮೂರ್ತಿಯ ಆರತಿಗೆ ಆರಂಭವಾಯಿತು. ಮಂಗಳಾರತಿಯ ನಂತರ ಮೀರಾಬಾಯಿಯು ಸ್ವಾಮಿಯ

ಸಮ್ಮುಖದಲ್ಲಿ ಆಸನಸ್ಥಳಾಗಿ ಗಾನಮಾಡಲಾರಂಭಿಸಿದಳು. ಭಕ್ತರ ನೇತ್ರಗಳು ಪ್ರೇಮಾಶ್ರುಗಳಿಂದ ತುಂಬಿದವು.

“ಮೂಢ ಮಾನವನು ಜೀವಿತದ ಅರ್ಧಭಾಗವನ್ನು ನಿದ್ರೆಯಲ್ಲಿ ಕಳೆಯುತ್ತಾನೆ. ಅವಶಿಷ್ಟ ಭಾಗದಲ್ಲಿ ಬಹ್ವಂಶವು ಬಾಲ್ಯ ವೃದ್ಧಾಪ್ಯಗಳಲ್ಲಿ ಕಳೆದುಹೋಗುತ್ತದೆ. ಉಳಿದ ಅಲ್ಪ ಸ್ವಲ್ಪ ಕಾಲವು ಮಾತ್ರ ಭಗವತ್ ಸೇವೆಯಲ್ಲಿ ವಿನಿಯೋಗಿಸಲ್ಪಡಲು ಸಾಧ್ಯ. ಇಂತಹ ಅತ್ಯಲ್ಪ ಕಾಲವನ್ನು ಸಹ ದುರುಪಯೋಗಪಡಿಸಿ, ಯೌವನದ ಕ್ಷುದ್ರಾನಂದ ಮತ್ತು ವೈಷಯಿಕ ಸುಖದ ಭ್ರಾಂತಿಯಲ್ಲೇ ಮುಳುಗಿರುತ್ತಾನೆ. ಅಹಾ! ಇದು ಎಂತಹ ದುರ್ಭಾಗ್ಯ! ಇದಕ್ಕಿಂತಲೂ ದುರ್ಯೋಗವುಂಟೇ?” ಎಂಬ ಈ ಅರ್ಥಯುಕ್ತ ಗೀತವನ್ನು ಗಾನಮಾಡುವಾಗ ಮೀರೆಯ ನೇತ್ರ ದ್ವಯಗಳಿಂದ ಆನಂದಾಶ್ರುಗಳು ಧಾರೆಗಟ್ಟಿ ಸುರಿಯುತ್ತಿದ್ದವು. ಪ್ರೇಕ್ಷಕರೆಲ್ಲರೂ ಪಶ್ಚಾತ್ತಾಪಯುಕ್ತರಾಗಿದ್ದರು.

ಪೂರ್ವೋಕ್ತ ಯುವಕನೂ ಗಾನ ಕೇಳಿದನು. ಮುಗ್ಧನಾಗಿ ಹೋದನು! ಯೋಚಿಸುತ್ತಾನೆ “ನಾನೆಂತಹ ದುರ್ದೈವಿ! ಈ ದೇವಿಯ ಮಧುರ ಗಾನಾಮೃತವನ್ನು ಪಾನಮಾಡುವ ಸುಯೋಗ ನನಗೆ ಇಲ್ಲವಲ್ಲ! ಒಂದು ದಿನದ ಗೀತವೇ ಇಷ್ಟು ಮೋಹಕವಾಗಿರುವಾಗ ಅಹರ್ನಿಶಿಯೂ ಈ ದೇವಿಯ ಸಹವಾಸದಲ್ಲಿರುವ ಅದೃಷ್ಟಶಾಲಿಯು ಎಷ್ಟು ಧನ್ಯನೋ? ಈ ಭಾಗ್ಯವು ನನಗುಂಟೆ?”

ಭಜನೆಯು ಸಮಾಪ್ತವಾಯಿತು. ಎಲ್ಲರೂ ಮನೆಗೆ ಹೊರಟರು. ರಾಜಕುಮಾರಿಯೂ ಮಂದಿರದಿಂದ ಹಿಂದಿರುಗುವ ಸಮಯ. ಆಗ ಆ ಅಥಿತಿಯು ಆಕೆಯ ಸಮ್ಮುಖಕ್ಕೆ ಬಂದು ರಾಜಪುತ್ರೀ, ನಿನ್ನ ಪ್ರಾರ್ಥನೆಯಂತೆ ನಾನು ಈದಿನ ನಿನ್ನ ಅತಿಥಿಯಾಗಿದ್ದೇನೆ. ಈ ನನ್ನ ಅನುರೋಧವನ್ನೂ ಮನ್ನಿಸುವದು ನಿನಗೂ ಉಚಿತವಾಗಿಯೇ ಇದೆ; ನನ್ನ ನಿನ್ನ ಭೆಟ್ಟಿಯು ಸ್ಮಾರಕವಾಗಿ ಈ ಉಂಗುರವನ್ನು ಸ್ವೀಕರಿಸು. ಒಂದಾನೊಂದು ಕಾಲದಲ್ಲಿ ಈ ಅತಿಥಿಯ ಜ್ಞಾಪಕ ಬರುವ ಸಂಭವ ಬಂದೀತು. ಅದಕ್ಕಾಗಿಯೇ ಇದನ್ನೀಗ ಕೊಡುತ್ತೇನೆ. ರಾತ್ರಿ ಮುಗಿಯುವದರೊಳಗಾಗಿಯೇ ನಾನು ಇಲ್ಲಿಂದ ಹೊರಡುವ ಸಂಭವವಿದೆ. ಈ ರೀತಿ ತೊಂದರೆ ಕೊಟ್ಟದಕ್ಕಾಗಿ ಕ್ಷಮಿಸು. ಎಂದಂದು ನುಡಿದು ಒಂದು ಉಂಗುರವನ್ನು

ಆಕೆಯ ಕೈಯಲ್ಲಿಟ್ಟನು.

ಮೀರೆಯು ಏನೆಂದೂ ಉತ್ತರಕೊಡಲಿಲ್ಲ. ಮುಹೂರ್ತ ಮಾತ್ರ ಸ್ತಬ್ಧಳಾಗಿದ್ದಳು. ಪುನಃ ತಲೆಯೆತ್ತಿ ನೋಡುವಷ್ಟರಲ್ಲಿ ಯುವಕನು ಹೊರಟು ಹೋಗಿದ್ದನು.

ಮೀರಾಬಾಯಿಯ ಹೆಸರು ರಾಜಪುಟಾಣದ ಗ್ರಾಮ ಗ್ರಾಮಾಂತರದ ಪ್ರಜಗಳಿಗೆಲ್ಲ ಪರಿಚಿತವಾಗಿದ್ದಿತು.

ರಾಜಧಾನಿಯಾದ ಚಿತ್ತೂರಿನಲ್ಲೆಲ್ಲ ಮೀರಾಬಾಯಿಯ ಸೌಂದರ್ಯ ಪ್ರಶಂಸೆಯೇ. ಪ್ರಭಾತ-ಸಂಧ್ಯೆಗಳಲ್ಲಿಯೂ, ಹಗಲು-ರಾತ್ರಿಗಳಲ್ಲಿಯೂ ಚಿತ್ತೂರಿನ ಗಲ್ಲಿ ಗಲ್ಲಿಗಳಲ್ಲೆಲ್ಲ—

"ಮೀರಾಕಹೇ ಬಿನಾ ಪ್ರೇಮಕೇ ನಾಹಿ ಮಿಲತ ನಂದಲಾಲಾ" ಎಂಬ ಗೀತವೇ ಪ್ರತಿಧ್ವನಿತವಾಗುತ್ತಿತ್ತು.

ಆ ಕಾಲದಲ್ಲಿ ಮಹಾರಾಣಾ ಕುಂಭನು ಚಿತ್ತೂರಿಗೆ ರಾಜನು. ಶೌರ್ಯ ಪ್ರದರ್ಶನದಲ್ಲಿಯೂ, ಕವಿತಾ ಚಮತ್ಕಾರದಲ್ಲಿಯೂ ಬಹು ಪ್ರಸಿದ್ಧನು. ಯಾರ ಹೃದಯದಲ್ಲಿ ಪ್ರೇಮಧಾರೆಯು ಅವಿಶ್ರಾಂತವಾಗಿ ಪ್ರವಹಿಸುತ್ತಿರುವುದೋ, ಯಾರ ವರ್ತನವು ಕಲಂಕರಹಿತವಾದ ಶುಭ್ರಸ್ಫಟಿಕದಂತೆ ನಿರ್ಮಲವಾಗಿದೆಯೋ, ಯಾರ ಸೌಂದರ್ಯ ಕುಸುಮವು ಪುಷ್ಪರಾಜಿಯನ್ನು ನಾಚಿಸುತ್ತಿರುವದೋ, ಅಂತಹ ಸ್ತ್ರೀಮೂರ್ತಿಯನ್ನೇ ರಾಜಮಹಿಷಿಯನ್ನಾಗಮಾಡಬೇಕೆಂಬುದು ಆತನ ಅಭಿಮತವಾಗಿದ್ದಿತು.

ಒಂದು ದಿನ "ಮೀರಾಕಹೆ ಬಿನಾ ಪ್ರೇಮಕೇ ನಾಹಿ ಮಿಲತ ನಂದಲಾಲಾ" ಎಂಬ ಗೀತವು ಆತನ ಕಿವಿಗೆ ಬಿದ್ದಿತು. ಮೀರೆಯು ಪ್ರೇಮನಿಧಿಯೇ ಅಲ್ಲದೆ, ಅತುಲ ಸೌಂದರ್ಯವತಿಯೂ ಎಂದೂ, ರೂಪದಲ್ಲಿ ಆಕೆಯನ್ನು ಸರಿಗಟ್ಟುವವರು ರಾಜಪುಟಾಣದಲ್ಲಿಯೇ ಯಾರೂ ಇಲ್ಲವೆಂದೂ ತಿಳಿಯಿತು. ಮೀರಾಬಾಯಿಯ ದರ್ಶನಕ್ಕಾಗಿ ರಾಣಾ ಕುಂಭನು ಉತ್ಸುಕನಾದನು. ಆದರೆ ಮೇಡತಾಸರದಾರನು ಮೇವಾಡದಲ್ಲಿನ ಒಬ್ಬ ಸಾಮಂತ; ಒಬ್ಬ ಕ್ಷುದ್ರ ಸಾಮಂತನ ಮನೆಗೆ ಮಹಾರಾಣಾನು ಹೋಗುವದೆಂತು! ಅದೂ ಒಬ್ಬ ಬಾಲಿಕೆಯ ದರ್ಶನಾರ್ಥವಾಗಿ! ಅದರಲ್ಲೂ ಆಕೆಯ ಗಾನಕ್ಕೆ ಮೋಹಿತನಾಗಿ!!! ಇದು ಮರ್ಯಾದೆಗೆ ಬಹಳ ಅಗೌರವ; ಮತ್ತು ಅಲಾಘವ. ಈ ರೀತಿ ಯೋಚಿಸುತ್ತ ಮೀರೆಯ ದರ್ಶನಾರ್ಥವಾಗಿ ಅತ್ಯುತ್ಸುಕ

ನಾದರೂ ರಾಜವೇಷದಿಂದ ಹೋಗಲು ಶಕ್ತನಾಗಲಿಲ್ಲ.

ಯಾವದೊಂದು ಸಂಗತಿಗೆ ಬಲುಮೆ ಮಾಡಿದರೆ ಮನಸ್ಸು ಕೇಳುವುದೇ. ನಾಲ್ಕೂಕಡೆಗಳಿಂದಲೂ "ಮೀರಾಕಹೆ" ಎಂಬ ಗೀತವು ಆತನ ಹೃದಯುವನ್ನು ಭೇದಿಸುತ್ತಿತ್ತು. ಕೊನೆಗೆ ಮೀರೆಯು ದರ್ಶನೋತ್ಸುಕತೆಯು ಆತನ ಮರ್ಯಾದೆ ಘನತೆ ಮುಂತಾದ ಭಾವನೆಗಳಿಗೆಲ್ಲ ತಿಲಾಂಜಲಿ ಕೊಡಿಸಿತು. ಛದ್ಮವೇಷಧಾರಿಯಾಗಿ ಮೇಡತಾಕ್ಕೆ ಹೋದನು. ಮತ್ತು ಮೇಲೆ ಹೇಳಿದಂತೆ ತನ್ನ ಉಂಗುರವನ್ನು ಮೀರೆಗೆ ಕೊಟ್ಟು ಅದರೊಂದಿಗೆ ತನ್ನ ಪ್ರಾಣಗಳನ್ನೂ ಆಕೆಯ ಸ್ವಾಧೀನ ಮಾಡಿ ಮೇವಾಡಕ್ಕೆ ಹಿಂತಿರುಗಿದನು. ಆದರೆ ಮನಸ್ಸನ್ನು ತನ್ನೊಡನೆ ತರಲು ಶಕ್ತನಾಗಲಿಲ್ಲ.

ಪ್ರಭಾತದಲ್ಲಿ ಪಕ್ಷಿಗಳು ಕಲರವ ಮಾಡುತ್ತಿರುವುವು. ಅದು ಮಹಾರಾಣಾನಿಗೆ ಮೀರೆಯ ಗಾನದಂತೆ ಭಾಸವಾಗುತ್ತಿತ್ತು. ಸರೋವರದಲ್ಲಿ ಪದ್ಮಗಳು ಅರುಣ ಕಿರಣನ ದರ್ಶನದಿಂದ ವಿಕಸಿತವಾಗುತ್ತಿದ್ದವು. ರಾಣಾನು ಅದನ್ನು ಮೀರೆಯ ಮಂದಹಾಸದಂತೆ ಭಾವಿಸುತ್ತಿದ್ದನು. ಅತಏವ ಆತನಿಗೆ ಸರ್ವವೂ ಮೀರೆಯ ಸ್ವರೂಪವಾಗಿಯೇ ಕಾಣುತ್ತಿದ್ದಿತು.

ರಾಣಾನಿಗೆ ಮೀರೆಯ ಹುಚ್ಚು ಹಿಡಿಯಿತು. ಆಸ್ಥಾನಕ್ಕೆ ಬರುತ್ತಿರಲಿಲ್ಲ. ಯಾರು ಎಲ್ಲಿ ಏನು ಮಾತನಾಡಿದರೂ "ಮೀರಾಕಹೆ" ಎಂಬ ಗಾನವೇ ಆತನ ಕರ್ಣಗಳಲ್ಲಿ ಪ್ರತಿಧ್ವನಿತವಾಗುತ್ತಿದ್ದಿತು. ಮಂತ್ರಿಗಳಿಗೂ ರಾಜಮಾತೆಗೂ ಈತನ ಮನೋಭಿಪ್ರಾಯವು ಗೊತ್ತಾಗಿ ಹೋಯಿತು. ಮೀರೆಯನ್ನು ರಾಜಮಹಿಷಿಯನ್ನಾಗಿ ಮಾಡಲು ರಾಜಮಾತೆಯು ಸಮ್ಮತಿಸಿ ಮೇಡತಾಕ್ಕೆ ದೂತರನ್ನೂ ಪುರೋಹಿತರನ್ನೂ ಕಳುಹಿಸಿದಳು.

ಈ ವರ್ತಮಾನವು ರಾಠೋರ ಸರದಾರನಿಗೆ ಅತ್ಯಂತ ಸಂತೋಷದಾಯಕವಾಯಿತು. ಏಕೆ? ತನ್ನ ಮಗಳು ಇಡೀ ಚಿತ್ತೋರಿಗೇ ಮಹಾರಾಣಿಯಾಗುತ್ತಾಳೆಂದು! ಈ ದಿನ ಗೋವಿಂದನ ಮಂದಿರದಲ್ಲಿ ದೊಡ್ಡ ಸಮಾರಂಭ. ಪುರೋಹಿತನು ವಿವಾಹ ಮುಹೂರ್ತವನ್ನು ನಿಶ್ಚಯಮಾಡಿಕೊಂಡು ಹಿಂತಿರುಗಿದನು.



# ( ೨ )

ವಿವಾಹಿತಳಾಗುವ ವಧುವಿಗೆ ಮಾತ್ರ ಆನಂದವಿಲ್ಲ. ಈ ವರ್ತಮಾನದಿಂದ ಆಕೆಯು ಪ್ರಫುಲ್ಲಿತಳಾಗಲಿಲ್ಲ.

ಉಂಗುರವನ್ನು ಸ್ವೀಕರಿಸಿದ ಮರುದಿನವೇ ಇದು ಯಾರ ಉಂಗುರವೆಂಬುದು ಮೀರೆಗೂ ಆಕೆಯ ಸಖಿಯರಿಗೂ ಗೊತ್ತಾಗಿ ಹೋಗಿತ್ತು. ಅದನ್ನು ಹಿಂದಕ್ಕೆ ಕಳುಹಿಸ ಬೇಕೆಂಬುವದೇ ಮೀರಾಬಾಯಿಯ ಅಪೇಕ್ಷೆ.

ಸಂಧ್ಯಾ ಸಮಯದಲ್ಲಿ ಶ್ರೀಗೋವಿಂದನ ಸೇವಾ ಭಜನಾದಿಗಳು ನಡೆದಮೇಲೆ ಸಖಿಯರೆಲ್ಲ ಮೀರೆಯನ್ನು ಕುರಿತು ಹಾಸ್ಯ ಪರಿಹಾಸ್ಯಗಳಿಗೆ ಪ್ರಾರಂಭಿಸಿದರು. ಒಬ್ಬಳು—

"ನನಗೆಲ್ಲ ಅಗಲೇ ಗೊತ್ತಾಗಿ ಹೋಗಿದೆ."

ಮೀರಾ—ಯಾವಾಗ?

ಸಖಿ—ಯುವಕನ ದರ್ಶನದಿಂದ ನಿನ್ನ ಮುಖವು ಆರಕ್ತವಾದಾಗ.

ಮೀರಾ—ಆತನ ದರ್ಶನದಿಂದ ನಾನು ಏಕೆ ಲಜ್ಜಿತಳಾದೆನೆಂಬುದು ನನಗೇ ತಿಳಿಯದು. ಸಖೀ, ನಿಶ್ಚಯವಾಗಿ ಹೇಳುತ್ತೇನೆ. ಚಿತ್ತೂರಿನ ರಾಣಿಯಾಗುವುದು ನನಗೆ ಸರ್ವಥಾ ಇಷ್ಟವಿಲ್ಲ. ಅದರಲ್ಲಿ ಆನಂದವೂ ತೋರುವುದಿಲ್ಲ. ಗೃಹಿಣಿಯಾಗುವದೇ ನನಗೆ ಬೇಕಾಗಿರುವದಿಲ್ಲ.

ಸಖಿ—ಕ್ಷತ್ರಿಯ ರಮಣಿಯರಿಗೆ ಇದಕ್ಕಿಂತಲೂ ಅಪೇಕ್ಷಣೀಯವಾದ ಸೌಭಾಗ್ಯ ಬೇರೆ ಉಂಟೆ?

ಮೀರಾ—ನನಗೆ ಈ ಸೌಭಾಗ್ಯ ಬೇಡ:—

ಸಖೀ—ಏಕೆ?

ಮೀರಾ—ಮಹಾರಾಣನು ನನ್ನಿಂದ ಸುಖಿಯಾಗಲಾರನು. ನನ್ನ ಮನಸ್ಸೆಲ್ಲ ಶ್ರೀ ಗೋವಿಂದನ ಪಾದಕಮಲದಲ್ಲಿ ಸಮರ್ಪಿತವಾಗಿದೆ. ಅಲ್ಲಿಂದ ಅದು ಪುನಃ ಹಿಂತಿರುಗಲಾರದು. ಕೇವಲ ದೇಹವೊಂದದರಿಂದ ಮಹಾರಾಣಾನಿಗೆ ಏನು ಸುಖವಾದೀತು?

ಸಖೀ—ಒಳ್ಳೆಯದು! ಚೆನ್ನಾಗಿ ಹೇಳುವೆ! ನಿನ್ನ ಮೇಲೆ ಮಹಾರಾಣಾನಿಗೆ ಬಹಳ ಪ್ರೇಮ. ಅಹರ್ನಿಶಿಯಲ್ಲಿಯೂ ಆತನ ಮುಖದಲ್ಲಿ "ಮೀರಾಕಹೆ"

ಮೀರಾ—ಅದು ಅನುರಾಗವಲ್ಲ. ಕೇವಲ ಮೋಹ, ರೂಪದ ಮೋಹ! ಸ್ವರದ ಮೋಹ! ಈ ಮೋಹಕ್ಕೇ ವಿಷಯಲಂಪಟಗಳು ಅನುರಾಗವೆಂದು ಕರೆಯುವರು. ಆದರೆ —

ಸಖೀ—ಆದರೆ ಏನು?

ಮೀರಾ—ಅದು ಮೋಹವಾಗಲಿ, ಅನುರಾಗವಾಗಲಿ, ಮಹಾರಾಣಾನಿಗೆ ಖಂಡಿತವಾಗಿಯೂ ಸುಖಕರವಾಗಲಾರದು. ವಿವಾಹಕ್ಕೆ ಮುಂಚಿತವಾಗಿಯೇ ಆತನಿಗೆ ಈ ವಿಷಯವನ್ನು ತಿಳುಹಿಸಬೇಕು. ನನ್ನ ಮನಸ್ಸು ನನ್ನ ಸ್ವಾಧೀನದಲ್ಲಿಲ್ಲ. ಪರಮಾತ್ಮನಿಗೆ ಅರ್ಪಿಸಲ್ಪಟ್ಟಿದೆ! ನಾನೇನು ಮಾಡಲಿ! ಪುನಃ ಆತನ ಭೆಟ್ಟಿಯ ಯೋಗ ಒದಗಿದಲ್ಲಿ ಈ ಮಾತನ್ನು ನಾನೇ ಸ್ವತಃ ಮಹಾರಾಣಾನಿಗೆ ಹೇಳುತ್ತೇನೆ.

---

## (೪)

ಆ ಸುಯೋಗವೂ ಒದಗಿತು. ವಿವಾಹಸಮಯವು ದೂರವರ್ತಿಯಾಗಿತ್ತು. ಕುಂಭನು ಮೀರಾಬಾಯಿಯನ್ನು ನೋಡದಿರಲು ಶಕ್ತನಾಗಲಿಲ್ಲ. ಗುಪ್ತರೂಪದಿಂದ ಪುನಃ ನೋಡತಕ್ಕೆ ಬಂದನು. ಇದು ಯಾರಿಗೂ ಗೊತ್ತಿಲ್ಲ. ಯಾರನ್ನು ನೋಡಲು ಬಂದಿದ್ದನೋ ಅವರಿಗೆ ತಿಳಿಯದಿರುವುದೇ? ಮೀರೆಯು ತನ್ನ ಸಖಿಯೊಬ್ಬಳಿಗೆ ಹೇಳಿದಳು. "ಮಹಾರಾಣಾನು ಗುಪ್ತವೇಷದಿಂದ ಜನಸಂದಣಿಯಲ್ಲಿದ್ದಾನೆ. ಆತನನ್ನು ಏಕಾಂತದಲ್ಲಿ ನೋಡಲು ನಾನು ಇಷ್ಟಪಡುತ್ತೇನೆಂದು ತಿಳುಹಿಸು."

ರಾಣಾನು ತನ್ನ ಬರುವಿಕೆಯು ಯಾರಿಗೂ ಗೊತ್ತಾಗಬಾರದೆಂದು ಪ್ರಯತ್ನಪೂರ್ವಕವಾಗಿಯೇ ವೇಷ ಮಾರ್ಪಡಿಸಿರಲು ತನ್ನ ಗುಟ್ಟು ಹೊರಬಿದ್ದ ಕೂಡಲೆ ಸ್ವಲ್ಪ ಲಜ್ಜಿತನಾದನು.

ಆರತಿಯ ನಂತರ ಭಜನೆಯೂ ಆಯಿತು. ಎಲ್ಲರೂ ಹೊರಟರು. ಏಕಾಂತದಲ್ಲಿ ರಾಣಾನು ಮೀರೆಗೆ ಭೆಟ್ಟಿಯಾದನು. ಮೀರೆಯ ಜೊತೆಯಲ್ಲಿ ಒಬ್ಬ ವಿಶ್ವಾಸಿನಿಯಾದ ಸಖಿಯೂ ಇದ್ದಳು.

ಈ ದಿನ ಮೀರೆಯು ಹಿಂದಿನಂತೆ ಲಜ್ಜಾವನತ ಮುಖಿಯಾಗಿರಲಿಲ್ಲ.

ಮೀರಾ—ಮಹಾರಾಣಾ, ಈ ದಾಸಿಯ ಅಪರಾಧವನ್ನು ಕ್ಷಮಿಸ

ಬೇಕು. ಚಿತ್ತೂರಿನ ರಾಣಿಯಾಗುವುದೂ, ಇಂದ್ರಾಣಿಯಾಗುವುದೂ ಒಂದೇ ಇಂತಹ ಸೌಭಾಗ್ಯದಿಂದ ಯಾವ ಕ್ಷತ್ರಿಯ ರಮಣಿಯು ತಾನೆ ಆನಂದಿತಳಾಗಲಾರಳು? ಆದರೆ ಈ ದೀನಳ ಸ್ವೀಕಾರದಿಂದ ತಮಗೇನೂ ಸುಖವಾಗುವಂತೆ ತೋರುವದಿಲ್ಲ.

ಮ. ರಾಣಾ—ಏಕೆ? ಮೀರಾ, ಇಂತಹ ನಿಷ್ಠುರ ಮಾತನ್ನೇಕೆ ಆಡುತ್ತೀ? ನಿನ್ನ ಸ್ವೀಕಾರದಿಂದ ಚಿತ್ತೂರಿನ ಭೂಮಿಯನ್ನು ಸ್ವರ್ಗವನ್ನಾಗಿ ಮಾಡಬೇಕೆಂದು ಕಲ್ಪನೆ ಮಾಡುತ್ತಿದ್ದೇನೆ.

ಮೀರಾ—ನನ್ನ ಮನಸ್ಸು ನನ್ನ ಸ್ವಾಧೀನದಲ್ಲಿಲ್ಲ. ಶ್ರೀಗೋವಿಂದನಿಗೆ ಅರ್ಪಿತವಾಗಿದೆ. ಅದನ್ನು ಅಲ್ಲಿಂದ ಹಿಂತಿರುಗಿಸಲು ಉಪಾಯವೇನೂ ತೋರುವದಿಲ್ಲ. ಮನವಿಲ್ಲದೆ ಕೇವಲ ದೇಹದಿಂದ ಪತಿಸೇವೆಯು ಸಮರ್ಪಕವಾಗಲಾರದು. ಆಗ ಅಪರಾಧಿನಿಯಾಗುತ್ತೇನಲ್ಲವೇ?

ರಾಣಾ—ಅಪರಾಧಿನಿಯೇ! ನೀನು ಹೇಳುತ್ತೀ ಮೀರಾ? ನೀನು ಚಿತ್ತೂರಿನ ಸಿಂಹಾಸನವನ್ನು ಅಲಂಕರಿಸಿದ ದಿನವು ಎಷ್ಟು ಸುಖದಾಯಕವಾಗುವದು? ಈ ರಾಣಾನಾದರೂ ಆ ಸ್ವರ್ಗದಲ್ಲೇ ಇಲ್ಲ! ಈ ಗುಣರಾಶಿಯಂಥವಳು ಭಾರತದಲ್ಲಿಯೇ ಇಲ್ಲ!!

ಮೀರಾ—ಮಹಾರಾಣಾ, ಈ ತುಚ್ಛದೇಹವನ್ನು ಹೊಗಳಿ ಹೊಗಳಿ ಈ ದಾಸಿಯನ್ನು ಅಪರಾಧಿನಿಯನ್ನಾಗಿಯೇ ಮಾಡುತ್ತೀರಿ. ಈ ದಾಸಿಗೆ ರಾಜಮಹಿಷಿಯಾಗುವದು ಸರಿಬರುವದಿಲ್ಲ. ಗೋವಿಂದನ ಸೇವೆಯಲ್ಲದೆ ಮೀರೆಯ ಪ್ರಾಣಗಳಿಗೆ ಪ್ರಿಯವಾದುದಿನ್ನೇನೂ ಇಲ್ಲ. ಮೇವಾಡಾಧೀಶನೇ, ಈ ಹತಭಾಗಿನಿಯಿಂದ ತಮಗೆ ಕಿಂಚಿತ್ತೂ ಸುಖವಾಗದು.

ರಾಣಾ—ಇಲ್ಲ, ಇಲ್ಲ, ಮೀರಾ! ಹಾಗೆ ಹೇಳಬೇಡ. ನಿನ್ನ ದರ್ಶನವೇ ನನಗೆ ಸುಖ! ನಿನ್ನ ಭಜನೆ ಕೇಳುವದೇ ಆನಂದ!! ಇದಕ್ಕಿಂತಲೂ ಹೆಚ್ಚಿನ ಸುಖವನ್ನೇನೂ ನಾನು ಅಪೇಕ್ಷಿಸುವದಿಲ್ಲ.

ಕುಂಭನು ಬೀಳ್ಕೊಂಡು ಹೊರಟನು. ಮೀರೆಯು ಮಂದಿರ ಸೇರಿದಳು. ವಿಷಾದದೊಡನೆ "ಮಹಾರಾಣನು ಭ್ರಮಿಷ್ಠನಾಗಿದ್ದಾನೆ." ಎಂದು ಅಂದುಕೊಂಡಳು.

ಮೀರೆಯ ಅದೃಷ್ಟ ಲಿಪಿಯು ಫಲೀಭೂತವಾಗಲು ಸಿದ್ಧವಾಯಿತು

## ( ೫ )

ಮೀರೆಯು ಚಿತ್ತೂರಿನ ರಾಜಮಹಿಷಿಯಾದಳು. ರಾಜಪರಿವಾರದವರೆಲ್ಲ ಏಕಲಿಂಗಸ್ವಾಮಿಯ ಭಕ್ತರು. ಮೀರೆಯು ವೈಷ್ಣವಳು. ಈಕೆಯ ವಿಷ್ಣುಭಕ್ತಿಯು ರಾಜಪರಿವಾರಕ್ಕೆ ಹ್ಯಾಗೆ ಹ್ಯಾಗೋ ಕಾಣಲಾರಂಭಿಸಿತು. ನಾಲ್ಕೆಂಟು ದಿನ ಕಳೆದವು. ಮೀರೆಯ ಮನಸ್ಸು ವಿಷಯ ಸುಖಕ್ಕೆ ಮೆಚ್ಚಲಿಲ್ಲ. ಅವಳು ಗೋವಿಂದನ ಧ್ಯಾನದಲ್ಲಿಯೇ ತಲ್ಲೀನಳು. ಆನಂದ ಮಗ್ನಳು.

ವಿಷಯ ಸುಖಾಪೇಕ್ಷೆಯಿಂದ ರಾಣಾಕುಂಭನು ಯಾವ ಸೌಂದರ್ಯ ಲತೆಯನ್ನು ತನ್ನ ಹೃದಯವೆಂಬ ವಾಟಿಕೆಯಲ್ಲಿ ರೋಪಣಮಾಡಿದ್ದನೋ ಆ ಲತೆಯಿಂದ ಅವನಿಗೆ ಯಾವಬಗೆಯ ಸೌಖ್ಯವಾಗದಾಯಿತು. ರಾಣಾನ ಆದರ, ಯತ್ನ, ಐಶ್ವರ್ಯದ ಆಡಂಬರ, ಭೋಗವಿಲಾಸ ಇವುಗಳಾವುದರಿಂದಲೂ ಮೀರೆಗೆ ಆನಂದವಿಲ್ಲ! ಇದರಿಂದ ರಾಣಾನು ಬಹಳ ಕ್ಷುಬ್ಧನಾದನು! ಈ ವನವಿಹಂಗಿಯನ್ನು ಪಂಜರದಲ್ಲಿ ಸೇರಿಸಿದುದು ತಪ್ಪಾಯಿ-ತೆಂದು ಒಮ್ಮೊಮ್ಮೆ ಯೋಚಿಸುವನು.

ಮೀರೆಯು ಕೇವಲ ಕರ್ತವ್ಯಕ್ಕಾಗಿ ಪತಿಸೇವೆಮಾಡುತ್ತಿದ್ದಳು. ಆದರೆ ಅದು ಆಕಾಂಕ್ಷಾಹೀನವಾಗಿದ್ದಿತು. ಆಕೆಯ ಮಧುರವಾಕ್ಯವು ನೀರಸವಾಗಿತ್ತು; ಹಾಸ್ಯವು ಉಲ್ಲಾಸಶೂನ್ಯ! ರಾಣಾನ ಆಜ್ಞೆಯಾದಾಗೆ ಮಾತ್ರ ಗಾನಮಾಡುತ್ತಿದ್ದಳು. ಅದರಲ್ಲಿ ಆನಂದದ ಲೇಶವೂ ಇರುತ್ತಿದ್ದಿಲ್ಲ. ಯಾವ ಮುಖಮಂಡಲದ ಸೌಂದರ್ಯಕ್ಕೆ ಮೋಹಿತನಾಗಿ ರಾಣಾನು ಮೀರೆಯನ್ನು ತಂದನೋ ಈಗ ಅದರಲ್ಲಿ ಆ ಸೌಂದರ್ಯವೇ ಇಲ್ಲ! ರಾ-ಣಾನು ಕೇವಲ ವ್ಯಥಿತನಾದನು.

ಕೆಲವು ದಿನ ಕಳೆದವು. ಇನ್ನು ರಾಣಾನಿಗೆ ಸುಮ್ಮನಿರಲಾಗಲಿಲ್ಲ. ಒಂದುದಿನ ಮೀರೆಯೊಡನೆ—

ರಾಣಾ—ಮೀರಾ, ಈ ರಾಜ್ಯ, ವೈಭವಗಳಾವುವೂ ನಿನಗೆ ಸುಖದಾಯಕವಾಗಲಿಲ್ಲವೇ? ಏತರಿಂದ ನಿನಗೆ ಸುಖವಾದೀತು ಹೇಳು? ನಿನ್ನ ಚಿತ್ತವು ಯಾವ ಸುಖಪ್ರಾಶನದಿಂದ ಶಾಂತವಾದೀತು ತಿಳಿಸು.

ಮೀರಾ—ಸ್ವಾಮಿನ್, ಈ ರಾಜ್ಯೈಶ್ವರ್ಯಾದಿಗಳೇತರಲ್ಲೂ ನನಗೆ

ಆಕಾಂಕ್ಷೆಯಿಲ್ಲ. ಇವುಗಳ ಪ್ರಾಪ್ತಿಯಿಂದ ಆನಂದವೂ ಇಲ್ಲ. ಅಥವಾ ಇವುಗಳ ವಿಯೋಗದಿಂದ ದುಃಖವೂ ಇಲ್ಲ. ಪಿತೃಗೃಹದಲ್ಲಿ ಶ್ರೀ ಗೋವಿಂದನ ಭಜನಗಾನಾದಿಗಳಿಂದ ನನಗೆ ಆನಂದವಾಗುತ್ತಿತ್ತು. ಹೃದಯವು ಅದನ್ನೇ ಈಗಲೂ ಇಚ್ಛಿಸುತ್ತಿದೆ. ಹಿಂದಿನಂತೆ, ಭಗವತ್ಸೇವೆಯಿಂದಲೇ ಈ ಜನ್ಮವನ್ನು ಸವಿಸಬೇಕೆಂಬುದೇ ನನ್ನ ಅಭಿಲಾಷೆ.

ರಾಣಾ—ಮೀರಾ-ನಾನೂ ಭಜನ ಗಾಯನಗಳಿಗೆ ಪ್ರೋತ್ಸಾಹ ಕೊಡುತ್ತಿದ್ದೇನೆ. ನೀನೂ ಹಾಡುತ್ತಿರುವೆ. ನಿನಗೆ ಇದರಿಂದೇಕೆ ಆನಂದ ವಾಗುವುದಿಲ್ಲ? ಹೇಳು.

ಮೀರಾ—ಮಹಾರಾಜ, ಈ ಗಾನವು ಕೇವಲ ಪತಿಯ ಮನೋರಂಜನಾರ್ಥವಾಗಿ ಮಾತ್ರ- ರಾಜನ ಆ ದೇಶಪಾಲನೆಗೋಸ್ಕರ- ಇದರಲ್ಲಿ ಮನಸ್ಸೆಲ್ಲಿದೆ?

ರಾಣಾನ ಮುಖವು ಗಂಭೀರವಾಯಿತು. ಸ್ವಲ್ಪ ಯೋಚಿಸಿ ಹೇಳಿದನು. "ಮೀರಾ, ನೀನು ಅಸುಖಿಯಾಗಿರುವುದನ್ನು ನೋಡುವುದು ನನ್ನಿಂದಾಗದು. ಈ ರಾಜಪುರಿಯಲ್ಲಿ ಶ್ರೀ ಗೋವಿಂದಮೂರ್ತಿಯ ಸ್ಥಾಪನೆ ಮಾಡುತ್ತೇನೆ. ಮೇಡತಾನಗರದಲ್ಲಿ ಹೇಗೆ ಕೀರ್ತನೆ ಮಾಡುತ್ತಿದ್ದೆಯೋ ಹಾಗೆ ಇಲ್ಲಿಯೂ ಭಗವನ್ನಾಮ ಕೀರ್ತನೆಮಾಡುತ್ತ ಆನಂದ ಹೊಂದು. ನಾನೂ ಶ್ರವಣಸುಖಾನುಭವವನ್ನು ಪಡೆಯುತ್ತೇನೆ."

## ( ೬ )

ಚಿತ್ತೂರಿನ ರಾಜಪ್ರಾಸಾದದ ನಡುವೆ ಶ್ರೀ ಗೋವಿಂದನ ಬಾಲ ಮೂರ್ತಿಯು ಸ್ಥಾಪಿಸಲ್ಪಟ್ಟಿತು. ಮೀರಾಬಾಯಿಯು ಆ ಮೂರ್ತಿಯ ಪುರೋಭಾಗದಲ್ಲಿ ಕೀರ್ತನೆ ಮಾಡಲಾರಂಭಿಸಿದಳು.

ರಾಜಪರಿವಾರವೆಲ್ಲ ಶೈವ ಸಾಂಪ್ರದಾಯವುಳ್ಳದ್ದು. ರಾಜನೂ ಏಕಲಿಂಗಸ್ವಾಮಿಯ ನಿಸ್ಸೀಮ ಭಕ್ತ. ರಾಣಾನಿಗೀಗ ದೊಡ್ಡ ಸಂಕಟ. ಒಂದು ಕಡೆ ಮೀರೆಯ ಪ್ರೇಮ, ಮತ್ತೊಂದು ಕಡೆ ಕುಲಧರ್ಮ. ಈಗ ಯಾವುದನ್ನೂ ಬಿಡುವಹಾಗಿಲ್ಲ. ಈ ಸಂಕಟಾವಸ್ಥೆಯಲ್ಲಿ ಒಂದು ರಾತ್ರಿ

ರಾಣಾನು ಏಕಲಿಂಗಸ್ವಾಮಿಯ ಮಂದಿರದಲ್ಲಿ ಪ್ರಾರ್ಥನೆಗೆ ಕುಳಿತನು. ಅರ್ಧ ರಾತ್ರಿಯಲ್ಲಿ ಆತನಿಗೆ ಒಂದು ದೃಷ್ಟಾಂತವಾಯಿತು. ನೋಡುತ್ತಿದ್ದ ಹಾ-ಗೆಯೇ ಆ ಅನಾದಿಲಿಂಗವು ರಜತ-ಶುಭ್ರ ಪುರುಷರೂಪಾಂತರ ಹೊಂದಿತು. ಆ ಮೂರ್ತಿಯ ಲಲಾಟದಲ್ಲಿ ಉಜ್ವಲಚಂದ್ರ, ಶಿರೋಭಾಗದಲ್ಲಿ ಜಟಾ, ಕಂಠದಲ್ಲಿ ಕಪ್ಪು ಇತ್ತು. ಇದ್ದಕ್ಕಿದ್ದ ಹಾಗೆ ಆ ಶುದ್ಧ ಸ್ಫಟಿಕ ಸಂಕಾಶ ಮೂರ್ತಿಯ ಅರ್ಧ ಭಾಗವೆಲ್ಲ ಕಪ್ಪಾಗಿ ಹೋಯಿತು. ಮಸ್ತಕಾರ್ಧದ ಮೇಲೆ ಮಯೂರಪುಚ್ಛದ ಚೂಡವೂ-ವಕ್ಷದ ಅರ್ಧಭಾಗದಲ್ಲಿ ಕೌಸ್ತುಭವೂ ದೃಗ್ಗೋಚರವಾದವು. ಆ ಮೂರ್ತಿಯು ಹಾಸ್ಯಪೂರ್ಣಮುಖದಿಂದ-- "ಭಕ್ತಶ್ರೇಷ್ಠನೇ, ನೋಡು! ಹರಿಹರರಿಬ್ಬರೂ ಒಂದೇ! ನೀನು ಮಾತ್ರ ಭೇದಭಾವನೆ ಮಾಡುತ್ತ ಭ್ರಮಿಷ್ಠನಾಗಿರುತ್ತೀ!!" ಎಂಬ ಸ್ವರವೂ ಕೇ-ಳಿದ ಹಾಗಾಯಿತು.

ಕುಂಭನು ಎಚ್ಚತ್ತನು. ಭಕ್ತಿಯುಕ್ತನಾಗಿ ಏಕಲಿಂಗಮೂರ್ತಿಗೆ ಪ್ರಣಾಮಮಾಡಿ ಹೊರಟನು. ಮೀರಾಬಾಯಿಯು ಇನ್ನೂ ಮನೆಗೆ ಬಂದಿರಲಿಲ್ಲ. ಗೋವಿಂದನ ಮಂದಿರದಲ್ಲಿ ಭಜನೆಮಾಡುತ್ತಲೇ ಇದ್ದಳು. ರಾಣಾನೂ ಅಲ್ಲಿಗೆ ಹೋದನು.

ಮೀರೆಯೊಡನೆ ಏಕಾಸನದಲ್ಲಿ ಕುಳಿತು ಆತನು ಕೀರ್ತನಕ್ಕೆ ಆರಂಭಿಸಿದನು. ಮೀರೆಗೆ ಆಶ್ಚರ್ಯವಾಯಿತು. ಅವಳು ಪ್ರೇಮದಿಂದ-

ಮೀರಾ—ಸ್ವಾಮಿನ್ ಮೀರೆಯ ಭಜನೆಯು ಈಗ ಸಾರ್ಥಕವಾ-ಯಿತು. ತಾವು ಏಕಲಿಂಗಸ್ವಾಮಿಯ ಭಕ್ತರು. ಗೋವಿಂದಮೂರ್ತಿಯ ಸಮ್ಮುಖದಲ್ಲಿ ಭಜನೆಮಾಡುವದನ್ನು ಕೇಳಿ ರಾಜಪರಿವಾರವೇನೆಂದೀತು?

ರಾಣಾ—ಯಾರು ಏನು ಬೇಕಾದದ್ದು ಅಂದುಕೊಳ್ಳಲಿ, ಏಕಲಿಂಗ ಸ್ವಾಮಿಯ ಆದೇಶವು "ಹರಿಹರರು ಒಂದೇ. ಭೇದವಿಲ್ಲ" ಎಂದಾಗಿದೆ. ಪ್ರಿಯೇ, ಈ ದಿನ ನಾನು ಬಹಳ ಆನಂದಿತನಾಗಿದ್ದೇನೆ. ನಿನ್ನ ಮನದಿಚ್ಛೆ ಏನಿದೆ ಹೇಳು? ಅದನ್ನು ಪೂರ್ಣಮಾಡುತ್ತೇನೆ.

ಮೀರಾ—ತಮ್ಮ ಮುಖದಿಂದ ಗೋವಿಂದನ ಭಜನೆಯನ್ನು ಕೇಳಿದಾಗಲೇ ನನ್ನ ಅಭೀಷ್ಟವೆಲ್ಲ ಪೂರ್ಣವಾಯಿತು ವೈಷ್ಣವರಾರಾದರೂ ಬಂದರೆ ಅವರಿಗೆ ಯಾರಿಂದಲೂ ತೊಂದರೆಯಾಗದಂತೆ ಅಪ್ಪಣೆಯಾದರೆ ಆನಂದವಾಗುತ್ತದೆ.

ರಾಣಾ—ಹಾಗೇ ಆಗಲಿ. ವೈಷ್ಣವರು ಬೇಕಾದವರು ಬರಬಹುದು. ನಾಳೆಯೇ ಆ ರೀತಿ ಅಪ್ಪಣೆಮಾಡುತ್ತೇನೆ.

---

# ( ೨ )

ಮಹಾರಾಣಾನ ಅಪ್ಪಣೆಯೂ ಆಯಿತು. ಪ್ರತಿದಿನವೂ ವೈಷ್ಣವರು ಬಂದು ಹೋಗಲು ಪ್ರಾರಂಭಿಸಿದರು. ಮೀರೆಯ ಆನಂದಕ್ಕೆ ಪಾರವೇ ಇಲ್ಲ. ಮುಂಚಿನ ಹಾಗೆಯೇ ಆಕೆಯ ಮುಖಕಮಲವು ಪ್ರಫುಲ್ಲವಾಯಿತು. ರಾಣಾನು ಸ್ವಯಂ ಕವಿಯಾಗಿದ್ದನು. ರಸಯುಕ್ತವಾದ ಹೊಸ ಹೊಸ ಕವಿತೆಗಳಿಂದ ಮೀರೆಗೆ ಆನಂದವನ್ನುಂಟುಮಾಡುತ್ತ ಆಕೆಯೊಡನೆ ಕೀರ್ತನೆಕ್ಕೆ ಸೇರುತ್ತಿದ್ದನು. ಆದರೆ ಇಂತು ಬಹುಕಾಲ ನಡೆಯಲಿಲ್ಲ. ಒಂದು ರಾತ್ರಿ ರಾಣಾನು ಗೋವಿಂದಮಂದಿರಕ್ಕೆ ಬಂದು ನೋಡುತ್ತಾನೆ. ನಾನಾ ದೇಶದ ವೈಷ್ಣವರೆಲ್ಲ ಅನಿಮಿಷ ನೇತ್ರಗಳಿಂದ ಮೀರೆಯನ್ನೇ ನೋಡುತ್ತಿದ್ದಾರೆ. ಮೀರೆಯು ಗೋವಿಂದಮೂರ್ತಿಯ ಸಮ್ಮುಖದಲ್ಲಿ ಕುಳಿತು ಕೀರ್ತನೆ ಮಾಡುತ್ತಿದ್ದಾಳೆ. ಆಕೆಗೆ ದೇಹದ ಮೇಲೆ ಸ್ಮೃತಿಯೇ ಇಲ್ಲ. ಎಲ್ಲರೂ ಆನಂದಸಾಮ್ರಾಜ್ಯದಲ್ಲಿ ಮುಳುಗಿದ್ದಾರೆ.

ಕುಂಭನಿಗೆ ಮನಸ್ಸು ತಲ್ಲಣಿಸಿತು. ಯೋಚಿಸುತ್ತಾನೆ. "ಇದೇನು! ಚಿತ್ತೂರಿನ ರಾಣಿ! ಯಾರ ಮುಖ ದರ್ಶನವು ಸೂರ್ಯ-ಚಂದ್ರರಿಗೂ ಅಲಭ್ಯವೋ, ಆಕೆಯು ಸಾಮಾನ್ಯ ಗಣಿಕಾ ಸ್ತ್ರೀಯಂತೆ ಸಭಾಮಧ್ಯದಲ್ಲಿ ನಿರ್ಲಜ್ಜಳಾಗಿ ಕುಳಿತದ್ದಾಳೆ. ಎಲ್ಲರ ದೃಷ್ಟಿಯೂ ಆಕೆಯ ಮೇಲೆಯೇ."

ಹಾಯ್! ಈ ಕಳಂಕಿನಿಯ ಮೋಹಕ್ಕೆ ವಶನಾಗಿ ನಮ್ಮ ಪವಿತ್ರ ವಂಶಕ್ಕೆ ಲಾಂಛನಪ್ರಾಯನಾದೆನಲ್ಲ! ಇದಕ್ಕಿಂತಲೂ ಅಪಮಾನವುಂಟೇ? ಈ ರೀತಿ ತನ್ನನ್ನೇ ಧಿಕ್ಕರಿಸಿಕೊಳ್ಳಲಾರಂಭಿಸಿದನು.

ರಾಣಾನಿಗೆ ಈ ವಿಷಯ ಹೊಳೆದುದು ಇದೇ ದಿನವಾದರೂ ರಾಜಪುರಿಯಲ್ಲಿ ಈ ಪ್ರಸ್ತಾಪವು ಬಹಳ ದಿನಗಳಿಂದಲೂ ನಡೆಯುತ್ತಿದ್ದುದು ಆತನ ಕಿವಿಗೆ ಬೀಳುತ್ತಿತ್ತು. ಕುಲಧರ್ಮಾಭಿಮಾನಿಗಳು ರಾಣಿಯ ಈ ನಡತೆಯಿಂದ ಅತ್ಯಂತ ಕ್ಷುಬ್ಧರಾಗಿದ್ದರು. ಎಲ್ಲರ ಬಾಯಲ್ಲೂ ರಾಜಮಹಿಷಿಯ ಸುದ್ದಿಯೇ!

ಇನ್ನು ಮಂದಿರದಲ್ಲಿ ನಿಲ್ಲಲಾಗಲಿಲ್ಲ. ಶಯನಾಗಾರಕ್ಕೆ ಹೋಗಿ ಹಿಬ್ಬ ಪ್ರಹರಿಣಿಯನ್ನು ಕೂಗಿ "ರಾಣಿಯನ್ನು ಈಗಲೇ ಕರೆ" ಎಂದು ಆಜ್ಞೆ ಮಾಡಿದನು! ಪ್ರಹರಿಣಿ—ರಾಜ್ಞಿಯವರು ಗೋವಿಂದಮಂದಿರದಲ್ಲಿ ಭಜನೆ ಮಾಡುತ್ತಿರುವರು. ರಾಣಿಯು ಭಜನೆಯಲ್ಲಿರುವುದು ರಾಜನಿಗೆ ಗೊತ್ತಿಲ್ಲವೆಂದೂ ಭಜನೆಯ ವಿಷಯವನ್ನು ಹೇಳಿದರೆ ಆತನು ಪ್ರಸನ್ನನಾಗುವನೆಂದೂ ಪ್ರಹರಿಣಿಯು ಯೋಚಿಸಿದಳು. ಹಿಂದೆಯೂ ಒಂದು ದಿನ ಹೀಗೆಯೇ ಆಗಿತ್ತು. ಈ ದಿನ ಮಾತ್ರ ಭಜನೆಯ ಶಬ್ದವು ಕಿವಿಗೆ ಬಿದ್ದ ಮೇಲಂತೂ ರಾಜನಮುಖವು ಆರಕ್ತವಾಯಿತು. ಇದರಿಂದೇನೊ ಪ್ರಮಾದ ಸಂಭವಿಸಿರಬಹುದೆಂದು ತಿಳಿದು ಪ್ರಹರಿಣಿಯು ಮಂದಿರದಕಡೆಗೆ ಓಡಿದಳು.

ಮೀರೆಯ ಕೀರ್ತನೆಯು ಇನ್ನೂ ಪೂರ್ತಿಯಾಗಿರಲಿಲ್ಲ. ಪ್ರಹರಿಣಿಯು ಮಹಾರಾಣನ ಆಜ್ಞೆಯನ್ನು ತಿಳುಹಿಸಿದುದೊಂದೇ ತಡ. ಅರ್ಧಗಾನದೊಡನೆ ಭಜನೆಯು ಸಮಾಪ್ತವಾಯಿತು. ಗೋವಿಂದನಿಗೆ ಪ್ರಣಾಮ ಮಾಡಿ ಶಯನಾಗಾರಕ್ಕೆ ಬಂದಳು.

ರಾಣಾ—"ಮೀರಾ!" ಸ್ವರವು ಕರ್ಕಶವಾಗಿತ್ತು.

ಮೀರಾ—(ವ್ಯಾಕುಲ ಚಿತ್ತಳಾಗಿ) ಸ್ವಾಮಿನ್.

ರಾಣಾ—ನೀನು ಚಿತ್ತೂರಿನ ರಾಣಿ! ಬಾಪ್ಪಾರಾವಲನ ಪವಿತ್ರ ವಂಶದ ವಧೂ ಅಲ್ಲವೆ?

ಮೀರಾ—ಅಪ್ಪಣೆಯಾಗಲಿ, ಮಹಾರಾಜ.

ರಾಣಾ—ಅಪ್ಪಣೆಯೇನು? ದೇಶ ದೇಶದ ಜನಗಳೆದುರಿಗೆ ಮನಸ್ವೀ ಹಾಡುವದು ಚಿತ್ತೂರಿನರಾಣಿಗೆ ಅಗೌರವವಲ್ಲವೇ? ಯಾವ ಮಹಾರಾಣಿಯ ದರ್ಶನವು ಚಂದ್ರ-ಸೂರ್ಯರಿಗೂ ಅಲಭ್ಯವೋ ಆಕೆಯು—

ಕ್ರೋಧ ಮತ್ತು ಸಂತಾಪದ ಭರದಿಂದ ರಾಣಾನಿಂದ ಮುಂದೇನೂ ಮಾತು ಹೊರಡಲಿಲ್ಲ. ಸ್ವಲ್ಪ ತಡೆದು,

ರಾಣಾ—ನಿನ್ನನ್ನು ನೋಡಿದುದು ಕೆಲ ಘಳಿಗೆ; ಕೆಲ ಕ್ಷಣದಲ್ಲಿಯೇ ನಿನ್ನ ಗಾನದಲ್ಲಿ ಮೋಹಿತನಾಗಿ ನಿನ್ನನ್ನು ಇಲ್ಲಿಗೆ ತಂದುದು. ಈ ಪವಿತ್ರ ವಂಶಕ್ಕೆ ನೀನು ಕಳಂಕಪ್ರಾಯಳು.

ಮೀರಾ—ಇದು ನನ್ನ ಅದೃಷ್ಟಲಿಪಿ.

ರಾಣಾ:—ಇದು ನ್ಯಾಯ! ನಾನು ಭ್ರಾಂತನಾಗಿದ್ದೆ. ತಪ್ಪನ್ನೀಗ ತಿದ್ದಿ ಕೊಳ್ಳಬೇಕಲ್ಲವೇ? ಒಬ್ಬ ಗಣಿಕೆಯ ಸೌಂದರ್ಯಕ್ಕೆ ಮೋಹಿತನಾಗಿ ರಾಣಾಕುಂಭನು ಚಿತ್ತೂರಿನ ರಾಜವಂಶಕ್ಕೆ ಕಳಂಕಪ್ರಾಯನಾದನಲ್ಲವೆ? ಹೇಳು.

ಮೀರೆಯ ಹೃದಯಕ್ಕೆ ವಜ್ರಾಘಾತವಾಯಿತು. ಅವಳು ವ್ಯಾಕುಲ ಕಂಠದಿಂದ—

ಸ್ವಾಮಿನ್, ಮೀರೆಯು ಮೀರೆಯೇ ಆಗಿರುವಳು. ಆಕೆಯು ಮಹಾ ರಾಣಿಯೂ ಅಲ್ಲ. ಗಣಿಕೆಯೂ ಅಲ್ಲ. ಮೀರೆಯು ಯಾರೆಂಬದನ್ನು ತಿಳಿದವನು ಹೃದಯಸ್ಥನಾದ ಗೋವಿಂದನೊಬ್ಬನೇ. ಮೀರೆಯ ಪ್ರಾಣವು ಗೋವಿಂದನದು. ದೇಹವು ಪತಿ ಕುಂಭಮಹಾರಾಜರದು. ದೇಹದಿಂದ ಪತಿಸೇವೆಯನ್ನೂ, ಮನಸ್ಸಿನದ್ವಾರ ಗೋವಿಂದನ ಸೇವೆಯನ್ನೂ ಮಾಡಲು ಇಷ್ಟವಿತ್ತು. ಆದರೆ ದೇಹ-ಮನಸ್ಸು ಇವೆರಡನ್ನೂ ಏಕೀಕರಿಸಿ ಪತಿ ಸೇವೆಮಾಡಲು ಶಕ್ತಳಾಗಲಿಲ್ಲ. ಈಗ ಮೀರೆಯು ಉಭಯ ಭ್ರಷ್ಟಳಾಗಿದ್ದಾಳೆ! ಈಕೆಯಂತಹ ಹತಭಾಗಿನಿಯರಿನ್ನಾರು? ಪತ್ನಿಯ ಕರ್ತವ್ಯವನ್ನು ಸಮರ್ಪಕವಾಗಿ ನಡೆಯಿಸದ ನನ್ನ ಅಪರಾಧವನ್ನು ಕ್ಷಮೆಮಾಡಬೇಕು.

ಮಹಾರಾಜ! ಪ್ರಭೋ! ಯಾವ ಉದ್ದೇಶದಿಂದ ಈ ದಾಸಿಯನ್ನು ಕರೆಯಿಸಿದಿರೋ ಅದು ಗೊತ್ತಾಯಿತು. ನಾಳೆಯ ಪ್ರಭಾತದಿಂದ ಚಿತ್ತೋರಿನವರಾರೂ ಮೀರೆಯ ಮುಖವನ್ನು ನೋಡಲಾರರು.

× × × × × × × ×

ಮೀರೆಯು ಎಲ್ಲಿಗೆ ಹೋದಳೆಂಬದು ಯಾರಿಗೂ ತಿಳಿಯಲಾರದು. "ತಮಗೆ ಕಳಂಕ ತಂದು ಈ ತುಚ್ಛಪ್ರಾಣವನ್ನಿರಿಸ ಬೇಕೆಂಬದು ಈ ದಾಸಿಯ ಅಭಿಮತವಲ್ಲ." ಹೀಗೆ ಹೇಳ ಹೇಳುತ್ತ ಪತಿಯ ಚರಣಗಳಲ್ಲಿ ಮಸ್ತಕವನ್ನಿಟ್ಟು ಪ್ರಣಾಮ ಮಾಡಿ ಹೊರಟು ಹೋದದ್ದೊಂದು ಮಾತ್ರ ಕುಂಭನಿಗೆ ಗೊತ್ತು.

ರಾಣಾನು ಕಲ್ಲಿನ ಗೊಂಬೆಯಂತೆ ನಿಂತು ಮೀರೆಯನ್ನು ನೋಡುತ್ತಿದ್ದನು. ಆಕೆಯ ಉದ್ವಿಗ್ನ ಭಾಷಣದಿಂದ ಆತನ ಹೃದಯದಲ್ಲಿ ಶೈತ್ಯ ಸಂಚಾರವಾಯಿತು. "ಮೀರೆಯೇ ಹೊರಡ ಬೇಡ" ಎಂತ ಹೇಳಲು ಮನಸ್ಸೇನೋ ಹಾತೊರೆಯುತ್ತಿತ್ತು ನಾಲಿಗೆ ಮಾತ್ರ ನಿಂತುಹೋಗಿತ್ತು.

ಮಧ್ಯರಾತ್ರಿ. ಗಾಢಾಂಧಕಾರ. ಚಿತ್ತೋರಿನಲ್ಲಿ ಎಲ್ಲರೂ ಅಚೇತನರಾಗಿದ್ದರು. ರಾಜಪುರಿಯು ನೀರವವಾಗಿದ್ದಿತು. ಈ ಸಮಯದಲ್ಲಿ ಸರ್ವವನ್ನೂ ಪರಿತ್ಯಾಗ ಮಾಡಿ ಮೀರೆಯು ಹೊರಟಿದ್ದಾಳೆ. ಆಕೆಯನ್ನು ನಿಲ್ಲಿಸಲಾರು ಶಕ್ತರು?

ಪ್ರಿಯವಾಚಕರೇ, ವಿಷಯಲಂಪಟರಿಗೆ ಭಗವದ್ಭಕ್ತರ ಹೃದಯವು ತಿಳಿಯುವ ಬಗೆಯೆಂತು? ಮೀರಾಬಾಯಿಯು ಮಹಾಭಗವದ್ಭಕ್ತೆಳು; ಸಂಪೂರ್ಣ ಮನಸ್ಸನ್ನು ಗೋವಿಂದನಿಗೆ ಅರ್ಪಿಸಿದವಳು; ಆದರೆ ರಾಣಾಕುಂಭನು ಇಂದ್ರಿಯಗಳ ದಾಸನು, ವಿಷಯಗಳ ಭೋಕ್ತಾರನು, ವಿಷಯಸುಖಕ್ಕಾಗಿಯೇ ಮನಸ್ಸನ್ನರ್ಪಿಸಿದವನು! ಇಂಥವನಿಗೂ ಮೀರಾಬಾಯಿಗೂ ಕೂಡುವ ಬಗೆಯೆಂತು? ಗಂಡನು ವಿರಕ್ತನಾದರೆ ಹೆಂಡತಿಗೆ ವಿಷಯಸುಖವು ಲಭಿಸದು. ಹೆಂಡತಿಯು ವಿರಕ್ತಳಾದರೆ ಗಂಡನಿಗೆ ವಿಷಯಸುಖವು ಲಭಿಸದು! ಇಂಥ ದಂಪತಿಗಳಲ್ಲಿ ಪ್ರೇಮಭಾವವು ಯಾವ ಕಾಲಕ್ಕೂ ಉಳಿಯದು. ದಂಪತಿಗಳ ಮನಸ್ಸು ಹಿಂದೇ ಬಗೆಯದಾಗಿದ್ದರೆ ಅವರು ಸುಖಕ್ಕೆ ಅರ್ಹರಲ್ಲವೇ? ಇಬ್ಬರೂ ವಿರಕ್ತರಾಗಬೇಕು ಇಲ್ಲವೆ ಇಬ್ಬರೂ ವಿಷಯಸುಖಾಪೇಕ್ಷಿಗಳಾಗಬೇಕು. ರಾಣಾ-ಮೀರಾಬಾಯಿಯರಲ್ಲಿ ಇಂಥ ಸಂಬಂಧವಿರದ್ದರಿಂದ ವಿಷಯಸುಖಾಭಿಲಾಷಿಯಾದ ರಾಣಾನಲ್ಲಿ ಈ ರೀತಿ ಕುಬುದ್ಧಿ ಉತ್ಪನ್ನವಾದದ್ದು ಸ್ವಾಭಾವಿಕವೇ ಸರಿ! ಆತನು ತನ್ನ ಕ್ಷುದ್ರ ವಿಷಯವಾಸನೆಯ ತೃಪ್ತಿಗಾಗಿ ಮೀರೆಯನ್ನು ಮದುವೆಯಾಗಿ ಆಕೆಯಿಂದ ತನಗೆ ಪ್ರಯೋಜನವಾಗದಿರಲು ಅವಳ ಭಗವದ್ಭಕ್ತಿಯನ್ನು ಹಳಿಯಲಾರಂಭಿಸಿದನು. ಆ ಮಹಾಸಾಧ್ವಿಯು ಅವನ ಕಣ್ಣಿಗೆ ಗಣಿಕೆಯಂತೆ ತುಚ್ಛಳಾಗಿ ತೋರಿದಳು. ಹಾಯ್! ಹಾಯ್! ಕಾಮಧೇನುವನ್ನು ಬರಡಾಕಳವೆಂದು ಹೊಡೆದಟ್ಟುವ ಮಹಾಮೂರ್ಖನ ಆಚರಣೆಯಂತೆ ರಾಣಾನ ಕೃತಿಯಾಯಿತು! ವಿಷಯಲಂಪಟಗಳು ಸದಾ ದುರ್ದೈವಿಗಳೇಸರಿ! ಇರಲಿ.

ಮೀರೆಗೆ ಎಲ್ಲಿಗೆ ಹೋಗುತ್ತೇನೆಂಬುದರ ಪರಿಜ್ಞಾನವು ಇರಲಿಲ್ಲ. ಯಾವದೋ ಒಂದು ದಾರಿಯನ್ನು ಹಿಡಿದು ಹೊರಟಿದ್ದಾಳೆ. ಎಷ್ಟು ಹೊತ್ತು ನಡೆದಳೋ ಅದೂ ಗೊತ್ತಿಲ್ಲ. ಮನಸ್ಸು ಚಿಂತಾಕುಲವಾಗಿತ್ತು. ಒಮ್ಮೆ ಶ್ರೀಗೋವಿಂದನ ನಾಮಸ್ಮರಣೆಮಾಡುವಳು. ಮತ್ತೊಮ್ಮೆ ರಾಣಾನ

ಮೂರ್ತಿಧ್ಯಾನ ಮಾಡುವಳು. ಕೆಲವು ಹೊತ್ತಿನ ಮೇಲೆ ಹಿಂತಿರುಗಿ ನೋಡುತ್ತಾಳೆ! ಕಗ್ಗತ್ತಲೆ! ಊರು ಕೇರಿ ಯಾವದೂ ಕಾಣಲಿಲ್ಲ. ಆಕೆಯ ನೇತ್ರಗಳಿಂದ ಅಶ್ರುವು ಪ್ರವಾಹರೂಪವಾಗಿ ಹರಿಯುತ್ತಿತ್ತು.

ಚಿತ್ತೂರಿನಿಂದ ಬಹು ದೂರ ನಡೆದಳು. ಗಹನಾರಣ್ಯ, ಮುಂದೆ ಮುಂದೆ ಗುಡ್ಡಗಳು. ಅವುಗಳನ್ನು ದಾಟಿ ಕೊನೆಗೆ ಒಂದು ನದೀ ತೀರಕ್ಕೆ ಬಂದಳು. ಅಲ್ಲಿಗಿ ನಡಿಗೆ ನಿಂತಿತು. ನಾಲ್ಕೂ ಕಡೆಗೆ ಎಲ್ಲಿ ನೋಡಿದರೂ ಕಾರ್ಗತ್ತಲೆ! ಆ ಅಂಧಕಾರದಲ್ಲಿ ನದಿಯ ದಂಡೆಯಲ್ಲಿ ನಿಂತು ಯೋಚಿಸುತ್ತಾಳೆ. "ಮುಂದೆಲ್ಲಿಗೆ ಹೋಗಲಿ? ಈ ನನ್ನ ಜನ್ಮದಿಂದ ಪ್ರಯೋಜನವೇನು? ನನ್ನೀಜೀವನವು ರಾಣಾನ ಪವಿತ್ರ ವಂಶಕ್ಕೆ ಕಳಂಕ ಕೊಟ್ಟಿತಲ್ಲವೇ! ಛೀ! ಛೀ! ಇಂತಹ ಜೀವನವನ್ನೇಕಿರಿಸಲಿ! ರಾಣಾನೇನೋ ನನ್ನಲ್ಲಿ ಭ್ರಮೆಪಟ್ಟನು. ನಾನು ಭ್ರಮಿಸ್ಸಳೆ? ಗೋವಿಂದನೇ! ಈ ಮನಸ್ಸನ್ನು ನಿನಗೆ ಸಮರ್ಪಿಸಿ ಬಹುಕಾಲವಾಗಿದೆ. ಇದು ನಿನ್ನದೇ, ತೆಗೆದುಕೋ. ರಾಣಾ! ಈ ದೇಹವು ನಿನ್ನದು. ನೀನು ಉಪೇಕ್ಷೆ ಮಾಡಿದ ಮೇಲೆ ಇದರಿಂದಿನ್ನೇನು ಪ್ರಯೋಜನ! ಪಂಚಭೂತನಿರ್ಮಿತವಾದ ಮಾಂಸಮಯ ಪಿಂಡವನ್ನು ಪಂಚ ಭೂತಗಳಲ್ಲೇ ಏಕೆ ಸೇರಿಸ ಬಾರದು?" ಹೀಗೆ ನುಡಿಯುತ್ತ ನದಿಯಲ್ಲಿ ಹಾರಿಕೊಂಡಳು. ಪ್ರವಾಹವು ಪ್ರಬಲವಾಗಿತ್ತು. ನದಿಯಲ್ಲಿ ಬಿದ್ದ ಕೂಡಲೆ ದೇಹದ ಸ್ಮರಣೆ ತಪ್ಪಿತು.

---

## ( ೮ )

ಮೀರೆಗೆ ಜ್ಞಾನ ಬಂದಾಗ ಸೂರ್ಯನು ಆಗ ತಾನೆ ಉದಯನಾಗುತ್ತಿದ್ದನು. ನದೀ ದಂಡೆಯಲ್ಲಿ ಒಬ್ಬ ವೃದ್ಧೆಯು ತೊಡೆಯ ಮೇಲೆ ಮೀರೆಯ ತಲೆಯನ್ನಿಟ್ಟು ಉಪಚರಿಸುತ್ತಿದ್ದಳು.

ಮೀರೆಯು ಕಣ್ಣುಬಿಟ್ಟುದರಿಂದ ವೃದ್ಧೆಯ ಮುಖವು ಪ್ರಸನ್ನವಾಯಿತು. ಹೊಸದೊಂದು ಬಟ್ಟೆಯನ್ನು ಉಡಲು ಕೊಟ್ಟಳು. ತನ್ನ ಜೋಳಿಗೆಯಲ್ಲಿದ್ದ ಔಷಧಿಯೊಂದನ್ನೂ ಕುಡಿಸಿದಳು. ಮೀರೆಗೆ ದೇಹದಲ್ಲಿ ಶಕ್ತಿ ಬಂದು ಎದ್ದು ಕುಳಿತಳು.

ವೃದ್ಧೆ—ಮಗಳೇ, ಪ್ರವಾಹದಲ್ಲಿ ನೀನು ತೇಲಿಕೊಂಡು ಹೋಗುತ್ತಿದ್ದೆ. ನದಿಯಲ್ಲಿ ಹಾಗೇಕೆ ಬಿದ್ದೆಯವ್ವಾ?

ಮೀರಾ—ಮನಃಪೂರ್ವಕವಾಗಿಯೇ ನದಿಯಲ್ಲಿ ಹಾರಿದೆ. ನನ್ನನ್ನೇಕೆ ಬದುಕಿಸಿದಿರಿ?

ವೃದ್ಧೆ—ಈ ಸುಂದರ ದೇಹ, ಈ ನವ ಯೌವನವಿದ್ದು ಹೀಗೆ ಮಾಡಲು ನಿನಗೇಕೆ ಬುದ್ಧಿ ಬಂತು? ಆತ್ಮಹತ್ಯವು ಮಹಾ ಪಾಪವೆಂಬುದು ನಿನಗೆ ತಿಳಿಯದೆ?

ಮೀರಾ—ಗೊತ್ತಿದೆ. ಈ ದೇಹವು ಯಾರದ್ದೋ-ಅವರಿಗಿದು ಬೇಕಿಲ್ಲ. ಮನಸ್ಸನ್ನಾರಿಗೆ ಅರ್ಪಿಸಿದ್ದೇನೆಯೋ ಆತನ ಸ್ಮರಣೆ ಮಾಡುತ್ತಾ ನದಿಯಲ್ಲಿ ಹಾರಿದೆ.

ವೃದ್ಧೆ—ಮಗು, ದೇಹ ಮತ್ತು ಮನಸ್ಸುಗಳನ್ನು ಬೇರೆ ಬೇರೆ ವ್ಯಕ್ತಿಗಳಿಗೇಕೆ ಕೊಟ್ಟೆಯಮ್ಮಾ? ಎರಡನ್ನೂ ಒಬ್ಬರಿಗೇ ಸಮರ್ಪಿಸಲು ಸಾಧ್ಯವಿಲ್ಲದೇ ಹೋಯಿತೇ? ಮಗಳೇ, ನೀನು ಭ್ರಮಿಷ್ಠಳಾಗಿದ್ದೀಯೆ!

ಮೀರಾ—ತಾಯಿ, ನನ್ನ ಅದೃಷ್ಟದಲ್ಲಿ ಅದಿಲ್ಲ.

ವೃದ್ಧೆಯು ತೀಕ್ಷ್ಣದೃಷ್ಟಿಯಿಂದ ಮೀರೆಯನ್ನು ನೋಡಿ ವಿಸ್ಮಿತಳಾಗಿ ನಿನ್ನ ಕೈಯಲ್ಲಿ ಚಕ್ರಚಿಹ್ನವಿದೆ. ನೀನಾರೋ ರಾಣಿಯಾಗಿರಬೇಕು. ನಿನ್ನ ಹೆಸರೇನೇ ತಾಯಿ?

ಮೀರಾ—ಈ ಹತಭಾಗಿನಿಯ ಹೆಸರು ಮೀರಾ.

ವೃದ್ಧೆ—ಓಹೋ! ಮೀರಾಬಾಯಿ! ರಾಣಾ ಕುಂಭನ ಪತ್ನಿ! ಗೋವಿಂದನ ಪರಮ ಭಕ್ತಳು! ನೀನಾವ ದುಃಖದಿಂದ ಆತ್ಮಹತ್ಯಕ್ಕೆ ಉದ್ಯುಕ್ತಳಾದೆ?

ಮೀರಾ—ತಾಯಿ, ನನ್ನ ಮನಸ್ಸನ್ನು ಅರ್ಪಿಸಿದ್ದೇನೆ ಗೋವಿಂದನಿಗೆ; ದೇಹವು ಅರ್ಪಿತವಾಗಿದೆ ರಾಣಾನಿಗೆ. ಇದರಿಂದ ನಾನು ರಾಣಿಯೂ ಆಗಲಿಲ್ಲ, ಶುದ್ಧ ವೈಷ್ಣವಿಯೂ ಆಗಲಿಲ್ಲ. ನನ್ನಿಂದ ಪತಿಸೇವೆಯೂ ಸರಿಯಾಗಿ ನಡೆಯಲಿಲ್ಲ; ಗೋವಿಂದನ ಸೇವೆಯೂ ನಡೆಯಲಿಲ್ಲ.

ವೃದ್ಧೆ:—ನೀನು ಭಾಗ್ಯವತಿ, ಉಭಯದೃಷ್ಟಿಯಿಂದಲೂ ಭ್ರಷ್ಟಳಲ್ಲ.

ಮೀರಾ:—ನನಗೆ ಎರಡೂಕಡೆಗಳಲ್ಲಿಯೂ ಆಧಾರ ತಪ್ಪಿಹೋಯಿತು.

ವೃದ್ಧೆ:—ಏಕೆ? ನಿನಗೆ ಪತಿ ಹಾಗು ಗೋವಿಂದನ ಸೇವೆಮಾಡಲು ಸಾಧ್ಯವಿತ್ತು. ಪತಿಯನ್ನೇ ಗೋವಿಂದನ ರೂಪವೆಂದು ತಿಳಿದಿದ್ದರೆ ಮನವೂ ದೇಹವೂ ಏಕತ್ರ ಸಮರ್ಪಿತವಾಗಿ ಎಲ್ಲವೂ ಸರಿ ಹೋಗುತ್ತಿರಲಿಲ್ಲವೆ?

ಇವೆರಡನ್ನೂ ಸಮತ್ವದಲ್ಲಿ ನಿಯೋಜಿಸಲು ನಿನಗೆ ತಿಳಿಯಲಿಲ್ಲವೇ?

ಮೀರಾ:—ಈ ವಿಷಯವು ಮುಂಚೆಯೇ ನನ್ನ ದೃಷ್ಟಿಯಲ್ಲಿ ಬರಲಿಲ್ಲ. ಗೋವಿಂದನು ಬೇರೆ. ಪತಿಯು ಬೇರೆ. ಎಂಬ ಭಾವನೆಯೇ ಇತ್ತು. ಮನಸ್ಸಿನಿಂದ ಗೋವಿಂದನನ್ನೂ ದೇಹದಿಂದ ಪತಿಯನ್ನೂ ಸೇವಿಸಲು ಪ್ರಯತ್ನಿಸುತ್ತಿದ್ದೆ! ಇದರಿಂದ ಪತಿಯನ್ನು ತೃಪ್ತಿಪಡಿಸಲಾಗಲಿಲ್ಲ. ಈ ದೇಹದ ಸ್ವಾಮಿಯ ಉಪೇಕ್ಷೆ ಮಾಡಿದ ಮೇಲೆ ಇದರಿಂದ ಪ್ರಯೋಜನವಿನ್ನೇನು? ಇದಕ್ಕಾಗಿಯೇ ಇದನ್ನು ಗಂಗಾದೇವಿಗೆ ಸಮರ್ಪಣೆ ಮಾಡಿದೆ. ತಾವೇಕೆ ಮೇಲಕ್ಕೆತ್ತಿದಿರಿ? ಇದರಿಂದಿನ್ನೇನು ಕೆಲಸ?

ವೃದ್ಧೆ:—ಮಗಳೇ! ನರದೇಹವು ಬಹು ತಪಸ್ಸಿನಿಂದ ಪ್ರಾಪ್ತವಾಗುವದು. ಇದನ್ನು ಮರೆತು ಈ ಅಮೂಲ್ಯವಾದ ದೇಹವನ್ನೇಕೆ ನೀರಿಗೆ ಹಾಕಲು ಇಚ್ಛಿಸುತ್ತೀ? ಮನುಷ್ಯನ ತುಚ್ಛ ವಿಷಯವಾಸನೆಗೆ ಸಾಧನವನ್ನಾಗಿರಿಸುವುದಕ್ಕೆ ಬದಲಾಗಿ ದೇವತಾ ಸೇವೆಗಿದನ್ನು ನಿಯೋಜಿಸು. ಗೋವಿಂದ ರೂಪಿಯಾದ ಪತಿಸೇವೆಗೆ ಈ ದೇಹವನ್ನು ಕೊಡಲು ಶಕ್ತಿಯಿಲ್ಲದಿದ್ದರೆ ಗೋವಿಂದನ ಸೇವೆಯನ್ನೇ ಮಾಡು. ಶ್ರೀ ಗೋವಿಂದನೇ ನಿನ್ನ ರಾಣಾನಾಗಲಿ. ನೀನು ಆತನ ರಾಣಿಯಾಗು.

ಮೀರಾ:—ನೀನಾರು ತಾಯಿ?

ವೃದ್ಧೆ:—ನಾನೊಬ್ಬಳು ಗೋತ್ರಗೃಹ ವಿಹೀನಸನ್ಯಾಸಿನಿ. ಈ ಪೃಥ್ವಿಯ ಮೇಲೆ ನನ್ನವರಾರೂ ಇಲ್ಲ. ಬೃಂದಾವನದಲ್ಲಿ ಈ ದೇಹವನ್ನು ಸಮರ್ಪಣೆ ಮಾಡಲು ಹೋಗುತ್ತಿದ್ದೇನೆ. ನೀನೂ ಹೊರಡು. ಆ ಪವಿತ್ರ ಕ್ಷೇತ್ರದಲ್ಲಿ ಗೋವಿಂದಸ್ವಾಮಿಯ ಸೇವೆ ಮಾಡು. ಗೋವಿಂದನೂ ಸಿಕ್ಕುತ್ತಾನೆ. ಪತಿಯೂ ಸಿಕ್ಕುತ್ತಾನೆ.

ಮೀರಾ:—ಆಗಲಿ ಅಲ್ಲಿಗೇ ಬರುತ್ತೇನೆ.

ಮೀರೆಯು ಎದ್ದಳು. ಕಂಠದಲ್ಲಿ ಅಮೂಲ್ಯವಾದುದೊಂದು ಮುಕ್ತಾಹಾರವಿದ್ದಿತು. ಅದನ್ನು ತೆಗೆದು ನೀರಿಗೆಸೆಯಲುದ್ಯುಕ್ತಳಾದಳು.

ವೃದ್ಧೆ:—ಹಾರವನ್ನೇನು ಮಾಡುತ್ತೀಯೇ! ತಾಯಿ?

ಮೀರಾ:—ನೀರಿಗೆಸೆಯುತ್ತೇನೆ.

ವೃದ್ಧೆ:—ಏಕೆ?

ಮೀರಾ:—ಇದರಿಂದೇನು ಪ್ರಯೋಜನ.

ವೃದ್ಧೆ—ಪ್ರಯೋಜನವಿದೆ. ಇನ್ನೂ ದೇಹವಿದೆ. ಇದರ ರಕ್ಷಣೆಗೆ

ವಸ್ತ್ರ ಭೋಜನಾದಿಗಳ ಅವಶ್ಯಕತೆಯುಂಟು. ಆಹಾರವಿಲ್ಲದೆ ದೇಹವು ನಿಲ್ಲಲಾರದು. ದೇಹರಕ್ಷಣೆಯಿಲ್ಲದೆ ಭಗವತ್ಸೇವೆ ಹೇಗಾದೀತು?

ಮೀರಾ—ಬೃಂದಾವನದಲ್ಲಿ ಮಧುಕರಿಯಿಂದ ಜೀವಿಸುತ್ತೇನೆ.

ವೃದ್ಧೆ—ಅದು ಆಗಲಾರದು. ಈ ಸೌಂದರ್ಯ ರೂಪದಿಂದ ಮಧುಕರಿಯೆ? ಅಪವಾದಕ್ಕೂ, ಕ್ಲೇಶಕ್ಕೂ ಕಾರಣ. ಮೇಲಾಗಿ ನೀನು ರಾಜಮಹಿಷಿ; ಭಿಕ್ಷೆಯ ತೊಂದರೆಯನ್ನು ಸಹಿಸಲಾರೆ! ದುಃಖೀಶರೀರವು ಭಗವತ್ಸೇವೆ ಮಾಡಲಾರದು. ಹಾರವನ್ನಿಟ್ಟುಕೋ. ಇದರ ಸಹಾಯದಿಂದ ಗೋವಿಂದಮೂರ್ತಿಯ ಪ್ರತಿಷ್ಠಾಪನೆ ಮಾಡಿಸು.

---

## ( ೯ )

ಮೀರೆಯು ಬೃಂದಾವನವನ್ನು ಸೇರಿದಳು. ಮಂದಿರ ನಿರ್ಮಾಣವಾಗಿ ಶ್ರೀಗೋವಿಂದ ಮೂರ್ತಿಯ ಪ್ರತಿಷ್ಠೆಯು ಆಯಿತು. ಪ್ರತಿಷ್ಠಿತ ಮೂರ್ತಿಯ ಹೆಸರು 'ರಾಣಾ ಗೋವಿಂದ' ಮೀರೆಯು ಮೂರ್ತಿಯ ಕಂಠದಲ್ಲಿ ಪುಷ್ಪ ಮಾಲೆಯನ್ನು ಹಾಕಿ ಪತಿ ರಾಣಾನಿಗೆ ಸಮರ್ಪಿಸಿದಂತೆ ಭಾವಿಸಿದಳು. ಕುಂಭನಿಗೆ ಭೋಗಕ್ಕೇನೇನು ಪದಾರ್ಥಗಳು ಪ್ರಿಯವೋ ಅವುಗಳನ್ನೆಲ್ಲ ಭಗವನ್ಮೂರ್ತಿಗೆ ಸಮರ್ಪಿಸಿ ಆನಂದಿಸುವಳು. ಒಮ್ಮೆ ಉಚ್ಚಸ್ವರದಿಂದ ರಾಣಾ ಎಂದು ಕೂಗುವಳು. ಮತ್ತೊಮ್ಮೆ ಗೋವಿಂದ ಎಂದು ನಾಮಗಾನ ಮಾಡುವಳು. ಅಂತೂ ಮೀರೆಗೆ ಪತಿಯೂ ಗೋವಿಂದನೂ ಒಂದೇ ಎಂಬುದೇ ದೃಢವಾಯಿತು.

ಈಗ ಮೀರೆಯ ಮನಸ್ಸಿನ ಭಾರವು ದೂರವಾಯಿತು. ರಾಣಾ ಗೋವಿಂದನ ಸನ್ಮುಖದಲ್ಲಿ ಹಸನ್ಮುಖಳಾಗಿ ಕುಳಿತು ಅಹರ್ನಿಶಿಯಲ್ಲಿ ಆತ್ಮನಿವೇದನ ಮಾಡುವಳು. ಆಕೆಯ ಭಕ್ತಿ ಪೂರ್ಣವಾದ ಮಧುರ ಸಂಗೀತದಿಂದ ಬೃಂದಾವನವೆಲ್ಲ ಪ್ರತಿಧ್ವನಿತವಾಗುತ್ತಿತ್ತು. ಪ್ರೇಮ ಪುತ್ಥಳಿಯಾದ ರಾಧೆಯೇ ದೇಹ ಧಾರಣೆ ಮಾಡಿ ಶ್ರೀಕೃಷ್ಣ ಮೂರ್ತಿಯ ಸೇವೆಮಾಡುತ್ತಿರುವಳೆಂದೇ ಬೃಂದಾವನವಾಸಿಗಳೆಲ್ಲರೂ ಅಭಿಪ್ರಾಯ ಪಡುತ್ತಿದ್ದರು.

ಆ ಕಾಲದಲ್ಲಿ ಬೃಂದಾವನವು ಅರಣ್ಯವಾಗಿತ್ತು. ಕೆಲ ಜನ ಬೈರಾಗಿಗಳು ಮಾತ್ರ ಅಲ್ಲಿ ವಾಸಮಾಡಿ ಭಕ್ತಿಮಾರ್ಗ ಪ್ರಚಾರ ಮಾಡುತ್ತಿದ್ದರು.

ಬೇರೆ ಜನರ ಸಂಚಾರವೇ ಅಲ್ಲಿರಲಿಲ್ಲ. ಆ ಬೈರಾಗಿಗಳಲ್ಲಿ ರೂಪಗೋಸ್ವಾಮಿಯು ಶ್ರೇಷ್ಠನಾಗಿದ್ದನು. ರೂಪಗೋಸ್ವಾಮಿಯು ದೊಡ್ಡ ವಿದ್ವಾಂಸ. ಕೆಲವು ಕಾಲ ಗೌಡ ಚಕ್ರವರ್ತಿಯ ಮಂತ್ರಿಯಾಗಿದ್ದನು. ಆತನಿಗೆ ವಿಷಯಭೋಗವು ರುಚಿಸಲಿಲ್ಲ. ಮಂತ್ರಿಯ ಕೆಲಸವನ್ನು ಬಿಟ್ಟು ಪ್ರೇಮಾವತಾರ ಶ್ರೀ ಚೈತನ್ಯದೇವನ ಶಿಷ್ಯನಾಗಿ ಆತನ ಆದೇಶಾನುಸಾರ ಕಂಥಾ-ಕೌಪೀನಧಾರಿಯಾಗಿ ವೃಂದಾವನಕ್ಕೆ ಬಂದಿದ್ದನು.

ರೂಪಗೋಸ್ವಾಮಿಯ ವೈರಾಗ್ಯವು ಅತುಲನೀಯವಾಗಿದ್ದಿತು. ಕೈಯಲ್ಲಿ ಕಮಂಡುಲ, ಕಂಕುಳಲ್ಲಿ ಜೋಳಿಗೆ; ಬೆನ್ನ ಮೇಲೆ ಒಂದು ಹಳೇ ವಸ್ತ್ರ. ಇಷ್ಟರ ಹೊರತು ಆತನ ಹತ್ತಿರ ಇನ್ನೇನೂ ಇರಲಿಲ್ಲ. ಎರಡು ರಾತ್ರಿ ಒಂದೇ ವೃಕ್ಷದ ಛಾಯೆಯಲ್ಲಿ ವಾಸಮಾಡಿದರೆ ತತ್ಸಂಬಂಧವಾದ ಮೋಹವೆಲ್ಲಿ ಉತ್ಪನ್ನವಾಗುವದೋ ಎಂಬ ಶಂಕೆಯಿಂದ ಒಂದೊಂದು ದಿನ ಒಂದೊಂದು ವೃಕ್ಷದಕೆಳಗೆ ವಾಸಮಾಡುತ್ತಿದ್ದನು. ಮೀರೆಗೆ ಈ ಸಂನ್ಯಾಸಿಯಲ್ಲಿ ಭಕ್ತಿಯು ಉತ್ಪನ್ನವಾಯಿತು. ಒಂದು ದಿನ ಭಿಕ್ಷಾಗ್ರಹಣಮಾಡಬೇಕೆಂದು ಸಂನ್ಯಾಸಿಯನ್ನು ಕರೆಯಲು ಬೇರೊಬ್ಬ ಸ್ತ್ರೀಯನ್ನು ಕಳುಹಿಸಿದಳು.

ಆ ಸ್ತ್ರೀಯು ಕರೆಯ ಬಂದಾಗ ಗೋಸಾವಿಯು ಒಂದು ವೃಕ್ಷದ ಬಳಿಯಲ್ಲಿ ಲೇಖನ ಸಾಮಗ್ರಿಗಳನ್ನೆ ಇಟ್ಟುಕೊಂಡು ಏನನ್ನೋ ಬರೆಯುತ್ತಿದ್ದನು. ಆ ಸ್ತ್ರೀಯು ಕರದ್ವಯಗಳನ್ನು ಜೋಡಿಸಿ—ಮಹಾತ್ಮನ್, ತಾವು ಈದಿನ ತಮ್ಮಲ್ಲಿ ಭಿಕ್ಷಾಗ್ರಹಣ ಮಾಡಬೇಕೆಂದು ನಮ್ಮ ಮೀರಾರಾಣಿಯು ಪ್ರಾರ್ಥಿಸುತ್ತಾಳೆ, ಎಂದಳು.

ಗೋಸಾವಿ:—(ಗಂಭೀರಧ್ವನಿಯಿಂದ ತಲೆಯನ್ನೂ ಮೇಲಕ್ಕೆತ್ತಿ) ನಿಮ್ಮ ಮೀರಾರಾಣಿಯು ಯಾರು?

ಸ್ತ್ರೀ:—ಹೊಸದಾಗಿ ಪ್ರತಿಷ್ಠಿಸಿದ ರಾಣಾಗೋವಿಂದ ಮೂರ್ತಿಯ ಮಂದಿರದಲ್ಲಿರತಕ್ಕ ಮೀರಾಬಾಯಿ—

ಗೋಸಾವಿ:—ಬಾಯಿಯ ಮಾತು ಹಾಗಿರಲಿ. ಕಾಷ್ಠ ಮೃಣ್ಮಯವಾದ ಸ್ತ್ರೀಮೂರ್ತಿಯ ದರ್ಶನದಿಂದಲೇ ಮುನಿಗಳ ಮನಸ್ಸು ಚಂಚಲವಾಗುವದು. ಹೀಗಿರಲು ವಿರಾಗಿಗಳಾದ ನಾವು ಸ್ತ್ರೀಯರ ಗೃಹಗಳಿಗೆ ಹೋಗುವುದು! ಅಲ್ಲಿ ಭಿಕ್ಷಾಗ್ರಹಣ ಮಾಡುವುದು! ಶಕ್ಯವೇ? ಎರಡನ್ನೂ

ಬಿಟ್ಟು ಬಹುಕಾಲವಾಯಿತು.

ಸ್ತ್ರೀಯು ಹಿಂತಿರುಗಿದಳು. ಈ ಉತ್ತರವನ್ನು ಮೀರೆಗೆ ತಿಳುಹಿಸಿದಳು. ಆಕೆಯು ಹಾಸ್ಯವದನಳಾಗಿ ಹೇಳಿದಳು.

"ಹೋಗು. ಈ ದೇಶದಲ್ಲಿ ವಾಸವಾಡುವ ಆತ್ಮನು ಸ್ತ್ರೀಯೋ, ಪುರುಷನೋ ಗೋಸಾಯಿಯನ್ನು ಕೇಳಿ ಬಾ. ಬೃಂದಾವನದಲ್ಲಿ ಶ್ರೀಕೃಷ್ಣನೊಬ್ಬನೇ ಪುರುಷ. ಅವರಿಷ್ಟವೆಲ್ಲ ಪ್ರಕೃತಿ. ಗೋಸಾಯಿಯು ಪುರುಷನಾಗಿದ್ದರೆ ಬೃಂದಾವನದಲ್ಲಿ ಪ್ರವೇಶ ಮಾಡುವ ಅಧಿಕಾರವೇ ಆತನಿಗಿಲ್ಲವೆಂದು ತಿಳುಹಿಸು."

ಸ್ತ್ರೀಯು ಪುನಃ ಹೋಗಿ ಈ ಮಾತನ್ನು ತಿಳಿಸಿದಳು. ಗೋಸಾಯಿಯು ಚಕಿತನಾದನು. ಗಾಢಾಂಧಕಾರದಲ್ಲಿ ತಟ್ಟನೆ ಮಿಂಚು ಹೊಳೆದಂತಾಯಿತು. ರೂಪಜಿಯು ಯೋಚಿಸುತ್ತಾನೆ.

"ಆಹಾ ನಾನು ಮಾಡಿದ್ದೇನು? ದೇಹಾತ್ಮಭಾವನೆಯಿನ್ನೂ ನನಗೆ ಹೋಗಿಲ್ಲ, ನಾನೆಂತಹ ಪಾಪಿ! ಇನ್ನೂ ಈ ದೇಹವನ್ನೇ 'ನಾನು' ಎಂತ ತಿಳಿದಿದ್ದೇನೆ. ಇಲ್ಲದಿದ್ದರೆ ನನನ್ನು ಪುರುಷನೆಂದೂ, ಬಾಯಿಯನ್ನು ಸ್ತ್ರೀಯೆಂದೂ ತಿಳಿಯುವ ತಾರತಮ್ಯವಿರುತ್ತಿತ್ತೇ?" ತಲೆಯನ್ನು ಮೇಲಕ್ಕೆತ್ತಿ ಆವಳ ಕಡೆಗೆ ನೋಡಿ ಇಂತು ಹೇಳಿದನು. ನಾನು ಅಪರಾಧಿಯಾದ್ದೇನೆ. ಮೀರಾಬಾಯಿಯು ನನ್ನ ಅಜ್ಞಾನಾಂಧಕಾರವನ್ನು ಈ ದಿನ ದೂರ ಮಾಡಿದ್ದಾಳೆ. ಈ ದಿನ ಆಕೆಯು ನನ್ನ ಗುರುವಾದಳು, ಎಂದು ತಿಳುಹಿಸು ಹೋಗು. ಈ ದಿನ ನಿಮ್ಮಲ್ಲಿಯೇ ಶಿಕ್ಷಾ ಸ್ವೀಕಾರ ಮಾಡುತ್ತೇನೆ.

## (೧೦)

ಮೀರೆಯು ಅರಮನೆಯನ್ನು ಬಿಟ್ಟುಕೂಡಲೇ ಇತ್ತ ರಾಣಾನಿಗೆ ಜ್ಞಾನೋದಯವಾಯಿತು. ಯೋಚಿಸುತ್ತಾನೆ. ಹಾಯ್! ನಾನೇನು ಮಾಡಿದೆ? ಮೀರೆಯು ನಿಜವಾಗಿಯೂ ಹೊರಟು ಹೋದಳೆ? ನಾನೇಕೆ ಆಕೆಯ ಮನಸ್ಸನ್ನು ನೋಯಿಸಿದೆ? ಅಂತಹ ಕಠೋರ ಶಬ್ದಗಳನ್ನೇಕೆ ನುಡಿದೆ? ಮೀರೆಯು ದಾದರೂ ತಪ್ಪೇನಿದೆ? ಬಾಲ್ಯದಿಂದಲೂ ಹ್ಯಾಗೆ ಇದ್ದಳೋ ಈಗಲೂ ಅಂತೆಯೇ ಇದ್ದಾಳೆ. ವಿವಾಹಕ್ಕೆ ಪೂರ್ವನೇ ಘಂಟಾಘೋಷವಾಗಿ

ಹೇಳಿದ್ದಳು—ದೇಹವನ್ನು ಮಾತ್ರ ನಿನಗೆ ಕೊಡಬಹುದು—ಮನಸ್ಸು ಭಗವದರ್ಪಿತವಾಗಿದೆ ಎಂದು. ಇದರಲ್ಲಿ ನನ್ನದೇ ಸರ್ವಾಪರಾಧ. ಆಗ ಇದು ಗೊತ್ತಾಗಲಿಲ್ಲ. ರೂಪಕ್ಕೆ ಮೋಹಿತನಾಗಿ ಮಧುರ ಸ್ವರಕ್ಕೆ ಮೋಹಪಟ್ಟು, ಭೋಗವಿಲಾಸದಾಸೆಯಿಂದ ಆ ವನವಿಹಂಗಿಯನ್ನು ಪಂಜರದಲ್ಲಿ ತಂದಿಟ್ಟೆನು; ಮತ್ತು ಈ ದಿನ ನಾನೇ ಪಂಜರದ ಬಾಗಿಲನ್ನು ತೆರೆದು ಬಿಟ್ಟೆ. ಪಕ್ಷಿಯು ಹಾರಿಹೋಯಿತು. ಈಗಿನ್ನೇನು ಗತಿ? ಬಹುಶಃ ಮೀರೆಯು ತಿರುಗಿ ಬಂದಾಳು. ಈ ಗಾಢಾಂಧಕಾರದ ಮಧ್ಯರಾತ್ರಿಯಲ್ಲಿ ಎಲ್ಲಿಗೆ ಹೋದಾಳು.''

ಪಾಪ! ಮೀರೆಯ ಮನಸ್ಸಿನ ಮೇಲೆ ಉಂಟಾದ ವಜ್ರಾಘಾತದ ಪರಿಣಾಮವೇನಾಯಿತೆಂಬುದು ರಾಣಾನಿಗೇನು ಗೊತ್ತು? ಎಲ್ಲವೂ ಸ್ವಾನುಭವದಿಂದಲೇ ಗೊತ್ತಾಗಬೇಕಲ್ಲವೇ?

ರಾಣಾನಿಗೆ ರಾತ್ರಿಯೆಲ್ಲಾ ಜಾಗರಣೆ. ಹೊರಗೆ ಒಂದು ಎಲೆ ಸರ ಗುಟ್ಟಿದರೂ ಮೀರಾ ಬಂದಳೆಂತಲೇ ಭಾವನೆ. ಸ್ವಲ್ಪ ಗಾಳಿಯ ಶಬ್ದವಾದರೆ ಕಿಟಕಿಯ ಕಡೆಗೆ ಬಗ್ಗಿ ನೋಡುವನು. ಕಣ್ಣುಗಳಂತೂ ನಿದ್ರೆಯಿಲ್ಲದೆ ಕೆಂಡದಂತಾಗಿದ್ದವು.

ಬೆಳಿಗ್ಗೆ ನಾಲ್ಕೂ ಕಡೆಗೆ ಜನಗಳು ಹೊರಟರು. ಎಲ್ಲಿ ಹುಡುಕಿದರೂ ಏನು ಮಾಡಿದರೂ ರಾಣಿಯ ಸುದ್ದಿಯೇ ಇಲ್ಲ. ನಿರಾಶಾಯುಕ್ತ ವರ್ತಮಾನದಿಂದ ರಾಜನ ಹೃದಯವು ಅತ್ಯಂತ ವ್ಯಥಿತವಾಯಿತು. ಕಣ್ಣುಗಳಿಂದ ನೀರು ಧಾರೆ ಧಾರೆಯಾಗಿ ಹರಿಯುತ್ತಿತ್ತು.

“ಮೀರಾ, ಎಲ್ಲಿರುವೆ?'' ಇದೇ ಆತನ ಮಂತ್ರಜಪ. ಗೋವಿಂದ ಮಂದಿರಕ್ಕೆ ಬಂದನು. ಮೀರೆಯು ಕುಳಿತು ಕೀರ್ತನೆ ಮಾಡುತ್ತಿದ್ದ ಆಸನವು ಹಾಗೆಯೇ ಇತ್ತು. ಕೀರ್ತನ ಮಾಡುವವಳು ಮಾತ್ರ ಇಲ್ಲ. ಮಂದಿರದಲ್ಲಿ ಗೋವಿಂದಮೂರ್ತಿಯ ಪೂಜಾ ಸಾಮಗ್ರಿಗಳೆಲ್ಲವೂ ಹಾಗೆಯೇ ಇವೆ. ಯಾವ ಸ್ವರಲಹರಿಯು ಬಾಹ್ಯಾಂತರಗಳಲ್ಲೂ ನಾಟ್ಯವಾಡುತ್ತಿತ್ತೋ ಅದು ಮಾತ್ರವಿಲ್ಲ.

ಈ ದಿನ ಮಂದಿರವು ನೀರವ! ಅರೆಗಳಿಗೆಯೂ ನಿಲ್ಲಲು ರಾಣಾನಿಗೆ ಸಾಧ್ಯವಾಗಲಿಲ್ಲ. ಶಯನಾಗಾರಕ್ಕೆ ಹೋದನು. ಪೂರ್ವ ರಾತ್ರಿಯು ಜ್ಞಾಪಕಕ್ಕೆ ಬಂದಿತು. ಅಲ್ಲಿಯೂ ನಿಲ್ಲಲಾರದೆ ದರ್ಬಾರಗೃಹಕ್ಕೆ ಹೋ

ದನು. ಆ ದಿನ ಆತನಿಗೆ ಯಾವುದೂ ಸರಿಬೀಳಲಿಲ್ಲ. ಪುಷ್ಪವಾಟಿಕೆಗೆ ಹೋದನು.

ಅಲ್ಲಿ ಪುಷ್ಪಗಳೆಲ್ಲಾ ಅರಳಿದ್ದವು. ಮೀರೆಯ ಕಾಂತಿಯ ಪ್ರಫುಲ್ಲತೆಯು ಜ್ಞಾಪಕಕ್ಕೆ ಬಂತು. ಕೋಗಿಲೆಗಳು ಗಾನಮಾಡುತ್ತಿದ್ದುವು. ಮೀರೆಯ ಕಂಠಧ್ವನಿಯ ಸ್ಮರಣೆ! ಲತೆಗಳು ಮಂದಮಾರುತನಿಂದ ಅಲ್ಲಾಡುತ್ತಿದ್ದುವು. ಅದು ಮೀರೆಯ ವೈಯ್ಯಾರದಂತೆ ಭಾಸವಾಗುತ್ತಿತ್ತು. ಅಂತೂ ರಾಣನಿಗೆ ಅಲ್ಲಿಯೂ ನಿಲ್ಲಲಾಗಲಿಲ್ಲ. "ಮೀರಾ, ಎಲ್ಲಿರುವೆ? ಒಂದಾವೃತ್ತಿ ದರ್ಶನಕೊಡು"

ಮೀರೆಯು ಬರಲಿಲ್ಲ. ಹಗಲು ಕಳೆಯಿತು, ರಾತ್ರಿಯಾಯಿತು, ಆಕೆಯ ಸುದ್ದಿಯೇ ಇಲ್ಲ. ಸಂಧ್ಯಾಕಾಲದ ಆರತಿಗೆ ಮೀರೆ ಬಂದಿರಬಹುದಲ್ಲವೇ? ಪೂಜಾದಿಗಳೆಲ್ಲಾ ಕ್ರಮಪ್ರಕಾರವಾಗಿ ಮಂದಿರದಲ್ಲಿ ನಡೆಯುತ್ತವೆ. ಅಲ್ಲಿ ಭಾಗ್ಯಲಕ್ಷ್ಮಿ ಮಾತ್ರ ಇಲ್ಲ.

ರಾಣನಿಗೆ ಹುಚ್ಚು ಹಿಡಿದಂತಾಯಿತು. ಶಯನಾಗಾರದಲ್ಲಿ ವ್ಯಸ್ತನಾಗಿ ಮಲಗಿದ್ದಾನೆ, ದೂರದಲ್ಲಿ ಯಾರೋ "ಮೀರಾಕಹೆ" ಎಂದು ಗಾನಮಾಡುತ್ತಾರೆ, ಕಿವಿಗೊಟ್ಟು ಕೇಳುತ್ತೇನೆ. ಈ ದಿನ ಮಾತ್ರ ಆ ಗಾನವು ಅತ್ಯಂತ ಮಧುರವಾಗಿತ್ತು. "ಆಹಾ ಮೀರೆಯು ಸಮೀಪಸ್ಥೆಯಾಗಿರುವಾಗ ಇದು ಇಷ್ಟು ಮಧುರವಾಗಿತ್ತೆ? ನನ್ನ ದುರ್ಭಾಗ್ಯದಿಂದ ವ್ಯಥಿತಳಾಗಿ ಹೊರಟೇಹೋದಳು" ಎಂದಂದುಕೊಳ್ಳುವನು.

ಆ ರಾತ್ರಿ ರಾಣಾನಿಗೆ ಸ್ವಪ್ನ. ಅದರಲ್ಲಿ ಮೀರೆಯು ವೈಕುಂಠದ್ವಾರದಲ್ಲಿ ನಿಂತಿದ್ದಾಳೆ. ಸ್ನಿಗ್ಧ ಹಾಸ್ಯಮಯಿಯಾಗಿದ್ದಾಳೆ. ರಾಣಾನ ಕಡೆಗೆ ತಿರುಗಿ "ಸ್ವಾಮಿನ್, ನೀನೇ ನನ್ನ ಗೋವಿಂದ. ನಿನಗೆ ದೇಹವನ್ನು ಮಾತ್ರ ಕೊಟ್ಟಿದ್ದೆ. ಮನಸ್ಸನ್ನು ಮಾತ್ರ ಕೊಡಲಾರದೆ ಹೋದೆ. ಇಗೋ ಈಗ ಶ್ರೀ ಗೋವಿಂದನ ಆಜ್ಞಾನುಸಾರ ಇದನ್ನೂ ನಿನಗೆ ಕೊಡಲು ಹಿಂದಿರುಗಿದ್ದೇನೆ, ತೆಗೆದುಕೋ" ಎನ್ನುತ್ತಾ ಎರಡೂ ಕೈಗಳನ್ನೂ ನೀಡಿದ್ದಾಳೆ. ಇಷ್ಟು ಹೊತ್ತಿಗೆ ಸ್ವಪ್ನಭಂಗವಾಯಿತು. ಒಂದೆರಡು ಘಳಿಗೆಯ ನಂತರ ಮತ್ತೊಂದು ಸ್ವಪ್ನ...–ಕುಲಸ್ವಾಮಿನಿಯಾದ ಭವಾನಿಯ ದಶಭುಜಯುಕ್ತಮೂರ್ತಿಯು ಪ್ರಕಟವಾಗಿ "ಭಕ್ತ! ಏನು ಮಾಡಿಬಿಟ್ಟೆ? ರಾಜ್ಯಲಕ್ಷ್ಮಿಯು ನಿನ್ನ ಮನೆಗೆ ಬಂದಿದ್ದಳು. ಈಗ ಆಕೆಯನ್ನೇಕೆ ಕಳುಹಿಸಿಬಿಟ್ಟೆ?" ಎನ್ನು

ತ್ತಿರುವಂತೆಯೇ ಭಯಗ್ರಸ್ತನಾಗಿ ರಾಜನು ಎಚ್ಚತ್ತನು.

ಈ ರೀತಿ ದಿನದ ಮೇಲೆ ದಿನ, ತಿಂಗಳ ಮೇಲೆ ತಿಂಗಳು ಕಳೆದರೂ ರಾಣಿಯ ಪತ್ತೆಯೇ ಇಲ್ಲ. ಆತ್ಮಹತ್ಯೆಯಿಂದ ದೇಹತ್ಯಾಗ ಮಾಡಿದಳೆಂತಲೇ ಎಲ್ಲರೂ ತಿಳಿದರು.

---

## (೧೧)

ಮೀರೆಯೇನೋ ಚಿತ್ತೂರಿನಲ್ಲಿಲ್ಲ. ಆಕೆಯ ಸಂಗೀತ ಮಾತ್ರ ಸಜೀವವಾಗಿದೆ. ಮನೆ ಮನೆಗಳಲ್ಲಿಯೂ, ದೇವಸ್ಥಾನ ರಸ್ತೆ ಎಲ್ಲಿ ನೋಡಿದರೂ ಯಾರ ಬಾಯಲ್ಲಾದರೂ 'ಮೀರಾ ಕಹೆ.' ಬದುಕಿದ್ದಾಗ ಒಂದು ಸ್ಥಾನದಲ್ಲಿದ್ದಳು. ಈಗ ಮನೆ ಮನೆಯಲ್ಲಿಯೂ ಮೀರೆಯೇ.

ಎಲ್ಲರಿಗಿಂತಲೂ ರಾಣಾನಿಗೆ ಆಕೆಯ ಹೆಸರು ಹೇಳಿದ್ದೆಲ್ಲಾ ಪ್ರಿಯವಾಯಿತು. ಆಕೆಯ ಕೀರ್ತನೆಗಳನ್ನೆಲ್ಲಾ ಸಂಗ್ರಹಿಸಿ, ಗೋವಿಂದಮಂದಿರದಲ್ಲಿ ಭಜನೆಯ ವ್ಯವಸ್ಥೆ ಮಾಡಿದನು. ಮಂದಿರದಲ್ಲೇನೋ ಮೀರೆಯಿಲ್ಲ. ಆಕೆಯ ಭಜನೆಯು ಮಾತ್ರ ಕ್ರಮವಾಗಿ ನಡೆಯುತ್ತಿದೆ. ಸಾಧು-ವೈಷ್ಣವರ ಸೇವೆಯು ಯಥಾಕ್ರಮದಲ್ಲಿ ನಡೆಯುತ್ತಿದೆ. ರಾಣಾನೇ ಸದಾ ಅವರ ಸೇವೆಯಲ್ಲಿ ರತನಾಗಿದ್ದಾನೆ. ಶಯನಾಗಾರದಲ್ಲಿ ಮೀರೆಯ ಸ್ಥಾನದಲ್ಲಿ ಆಕೆಯ ಭಾವಚಿತ್ರವಿದೆ. ಪ್ರತ್ಯಹವೂ ರಾಜನ ಅಶ್ರುಧಾರೆಗಳಿಂದಲೇ ಅದಕ್ಕೆ ಅಭಿಷೇಕ.

ಚಿತ್ತೂರನ್ನು ಬಿಟ್ಟಮೇಲೆ ಮೀರೆಯು ಚಿತ್ತೂರೇಶ್ವರಿಯಾಗಿದ್ದಾಳೆ. ಮನೆ ಮನೆಯಲ್ಲಿಯೂ ರಾಜನಿಂದ ಭಿಕ್ಷುಕನ ವರೆಗೂ ಎಲ್ಲರ ಬಾಯಲ್ಲೂ "ಮೀರಾಕಹೆ!"

---

## [೧೨]

ಒಂದು ದಿನ ಅರಮನೆಯ ಮುಂಭಾಗದಲ್ಲಿ ಭಿಕ್ಷುಕನೊಬ್ಬನು ಹಾಡುತ್ತಿದ್ದನು. ಅದು ರಾಣಾನ ಕಿವಿಗೆ ಬಿತ್ತು. ಅದರ ಕೊನೆಯಲ್ಲಿ 'ಮೀರಾಕಹೆ' ಎಂಬ ಅಂಕಿತವೂ ಇತ್ತು. ಇದು ಹೊಸಕೀರ್ತನೆ ಹಿಂದೆ

ಎಲ್ಲಿಯೂ ಕೇಳಿರಲಿಲ್ಲ. ಭಿಕಾರಿಯು ರಾಜನ ಸಮ್ಮುಖಕ್ಕೆ ಕರೆಯಿಸಲ್ಪಟ್ಟನು. ಕೀರ್ತನೆಯನ್ನು ಪುನಃ ಕೇಳಿ—

ರಾಜ ಬೈರಾಗಿಗಳೇ, ನೀವು ಈ ಗೀತವನ್ನೆಲ್ಲಿ ಕಲಿತಿರಿ"

ಭಿಕಾರಿ—ಮಹಾರಾಜಾ, ಬೃಂದಾವನದಲ್ಲಿ.

ಪ್ರೇಮಮೂರ್ತಿಯಾದ ರಾಧೆಯೇ ಅಲ್ಲಿ ಪ್ರಕಟಳಾಗಿದ್ದಾಳೆ. ದಿನ ದಿನವೂ ಹೊಸ ಕೀರ್ತನೆಗಳಿಂದ ಶ್ರೀಕೃಷ್ಣಸೇವೆ ಮಾಡುತ್ತಿರುವಳು.

ರಾಜ—ಆಕೆಯ ಹೆಸರೇನು?

ಭಿಕಾರಿ—ಕೆಲವರು ಆಕೆಯನ್ನು "ಬಾಯಿ" ಎಂತಲೂ, ಕೆಲವರು "ರಾಣಿ" ಎಂತಲೂ ಕರೆಯುತ್ತಾರೆ. ಆಕೆಯು ಮಾತ್ರ ಸ್ವಯಂ "ಮೀರಾ" ಎಂದುಕೊಳ್ಳುತ್ತಾಳೆ. ಕೀರ್ತನೆಯ ಮುದ್ರಿಕೆಯು "ಮೀರಾಕಹೆ" ಎಂದಿದೆ.

ರಾಜ—ಹಾ! ಗೊತ್ತಾಯಿತು.

ಭಿಕ್ಷುಕನಿಗೆ ಹೆಚ್ಚು ಪಾರಿತೋಷಕ ಸಿಕ್ಕಿತು. ಆತನ ಮಾತುಗಳಿಂದ "ಮೀರೆಯು ಇನ್ನೂ ಬದುಕಿದ್ದಾಳೆ. ಬೃಂದಾವನದಲ್ಲಿರುವಳು." ಎಂತ ಅರ್ಥವಾಯಿತು.

---

## (೧೩)

ಮೀರೆಯು ಕುಟೀರದ ಮಧ್ಯದಲ್ಲಿ ಶ್ರೀ ಗೋವಿಂದಮೂರ್ತಿಯು ಪ್ರತಿಷ್ಠಿತನಾಗಿದ್ದಾನೆ. ಮೀರಾಬಾಯಿಯು ಮೂರ್ತಿಯ ಸನ್ಮುಖದಲ್ಲಿ ಆಸನಸ್ಥಳಾಗಿ ಕೀರ್ತನೆ ಮಾಡುತ್ತಿದ್ದಾಳೆ.

ಸಂಧ್ಯಾಕಾಲ. ಇಬ್ಬರು ಅತಿಥಿಗಳು ಅಂಗಳದಲ್ಲಿ ನಿಂತು ಭಜನೆಯನ್ನು ಕೇಳುತ್ತಿದ್ದಾರೆ. ಶ್ರೋತೃಗಳಲ್ಲೊಬ್ಬನ ಕಣ್ಣುಗಳಿಂದ ಧಾರೆ ಧಾರೆಯಾಗಿ ಅಶ್ರುಪಾತವಾಗುತ್ತಿತ್ತು.

ಈತನೇ ರಾಣಾಕುಂಭ. ಮತ್ತೊಬ್ಬನು ಈತನ ಅನುಯಾಯಿ. ರಾಣಾನು ವೈಷ್ಣವ ಬೈರಾಗಿಯ ವೇಷತಾಳಿದ್ದನು. ಗುರ್ತು ಹಿಡಿಯುವದು ಬಹಳ ಕಷ್ಟವಾಗಿತ್ತು. ಕೀರ್ತನೆ ಮುಗಿಯಿತು. ಮೀರಾಬಾಯಿಯು ಸ್ವಾಮಿಯ ಎದುರಿಗೆ ಕೈಜೋಡಿಸಿಕೊಂಡು "ಹೇ ಭಗವನ್!" ನೀನೇ

ನನ್ನ ಗೋವಿಂದ; ನೀನೇ ನನ್ನ ರಾಣಾ. ನನ್ನ ಶೇಷಾಯುಷ್ಯವು ನಿನ್ನ ಸೇವೆಯಲ್ಲೇ ಕಳೆದು ಹೋಗಲಿ. ಒಮ್ಮೆ ರಾಣಾನ ಮುಖಕಮಲದರ್ಶನ ವಾದರೆ ಕೃತಾರ್ಥಳು. ಸ್ವಾಮೀ ಈ ಸ್ತ್ರೀಜನ್ಮವನ್ನು ಸಾರ್ಥಕ ಮಾಡು.

ವೈಷ್ಣವ ಅತಿಥಿಗಳು ಇದನ್ನು ಕೇಳಿದರು. ರಾಣನಿಗಂತೂ ಹೃದಯವು ಕರಗಿ ನೀರಾಗಿ ಹೋಯಿತು.

ಬಾಯಿಯು ಸ್ವಾಮಿಗೆ ಪ್ರಣಾಮುಮಾಡಿ ಪಕ್ಕದ ಕೊಠಡಿಗೆ ಹೊರಟಳು. ಛದ್ಮವೇಷದ ರಾಣನು ಆಕೆಯ ಸಮೀಪಸ್ಥನಾಗಿ "ರಾಣಿ! ಭಿಕ್ಷಾಂದೇಹಿ"

ಮೀರಾ—ಏನು ಭಿಕ್ಷೆ ಬೇಕು ಕೇಳಿರಿ. ನಾನು ರಾಣಿಯಲ್ಲ, ಭಿಕಾರಿಣಿ,

ಭಿಕ್ಷುಕ—ಹಾಗೆಯೇ ಆಗಲಿ, ನನಗೆ ಬೇಕಾದದ್ದು ನಿನ್ನಲ್ಲಿದೆ.

ಮೀರಾ—ಅದೇನು ಅಪ್ಪಣೆಯಾಗಲಿ.

ಭಿಕ್ಷುಕ—ಕ್ಷಮಾ—

ಹೊರಗೆ ಒಂದಾವೃತ್ತಿ ಮಿಂಚುಹೊಳೆಯಿತು. ಅದರ ಬೆಳಕಿನಲ್ಲಿ ಮೀರೆಯು ಅತಿಥಿಯ ಗುರ್ತುಹಿಡಿದಳು. ಆಕೆಯ ಹೃದಯದಲ್ಲಿಯೂ ಪ್ರಕಾಶವಾಯಿತು.

"ಸ್ವಾಮಿನ್ ಇಷ್ಟು ದಿನದಮೇಲೆ ದಯೆಬಂದಿತೆ?" ಎನ್ನುತ್ತಾ ರಾಣನ ಚರಣಗಳ ಮೇಲೆ ಮಸ್ತಕವನ್ನಿಟ್ಟಳು. ಕುಂಭನು ಮೀರೆಯನ್ನು ಹಿಡಿದೆತ್ತಿದನು. "ಮೀರಾ—ನನ್ನ ಮೀರಾ—" ಕಂಠವು ರುದ್ಧವಾಯಿತು. ಮುಂದೆ ಮಾತು ಹೊರಡಲಿಲ್ಲ.

ಗೋವಿಂದ ಮೂರ್ತಿಯ ಸಮೀಪದಲ್ಲಿ ರಾಣಾಕುಂಭನು ಆಸನಸ್ಥನಾಗಿದ್ದಾನೆ. ಮೀರಾರಾಣಿಯು ಪತಿ ಹಾಗು ಗೋವಿಂದ ಇವರಿಬ್ಬರನ್ನು ಏಕದೃಷ್ಟಿಯಿಂದ ನೋಡುತ್ತಾ ಪೂಜಾತತ್ಪರಳಾಗಿದ್ದಾಳೆ. ಇಂತಹ ಅಲೌಕಿಕ ಸೇವೆಯಿಂದ ಮುಗ್ಧನಾದ ರಾಣಾನ ಹೃದಯವು ಕರಗಿ ನೇತ್ರದ್ವಾರಗಳಿಂದ ಪ್ರಕಟವಾಗುತ್ತಿದೆ. ಮೀರೆಯ ನೇತ್ರಗಳೂ ಆನಂದಾಶ್ರುಗಳಿಂದ ತುಂಬಿವೆ.

ಭಾರತ ರಮಣಿಯರಿಗೆ ಇದಕ್ಕಿಂತಲೂ ಶ್ರೇಷ್ಠವಾದ ಭಾಗ್ಯವು ಇನ್ನಾವುದು?

ಪ್ರಿಯವಾಚಕರೇ, ಮೀರಾರಾಣಿಯ ಭಾಗ್ಯವನ್ನು ನೋಡಿದಿರಾ! ಆಕೆಯ ಸದ್ಭಕ್ತಿಗೆ ಸಚ್ಛೀಲಾಚರಣೆಗೆ ಭಗವಂತನು ಸುಪ್ರಸನ್ನನಾಗಿ ಆಕೆಯ ಗಂಡನನ್ನು ಆಕೆಯಿದ್ದಲ್ಲಿಗೆ ಬರಮಾಡಿದನು. ಮನುಷ್ಯನು ಕ್ರಿಯಾವಂತನಾದರೆ ಆತನಿಗೆ ಅನಿಷ್ಟವು ಯಾವ ಕಾಲಕ್ಕೂ ಒದಗಲಾರದು. ಮೊದಮೊದಲು ಕ್ರಿಯಾವಂತರು ಪಡುವ ಕಷ್ಟವನ್ನು ನೋಡಿ ದುರ್ಜನರು ನಗುವರು. ಚಪ್ಪಾಳೆ ಬಾರಿಸುವರು. ಈತನ ಭಕ್ತಿಯೇನು ಸುಟ್ಟಿತು. ಸುಮ್ಮನೆ ಹತ್ತುಮಂದಿಯಂತೆ ಇರಬಾರದೆ ಎಂದು ಚೇಷ್ಟೆ ಮಾಡುವರು. ಆ ಚೇಷ್ಟೆಗೆ ಕ್ರಿಯಾವಂತರು ಅಂಜದಿದ್ದರೆ ಕೃತ್ರಿಮ ವಿಘ್ನಗಳನ್ನುಂಟು ಮಾಡುವರು. ಇವೆಲ್ಲವುಗಳಿಗೂ ಕ್ರಿಯಾವಂತನು ಸೊಪ್ಪುಹಾಕಲಾರನು. ಭಗವಂತನಲ್ಲಿ ಅಥವಾ ಗುರುಹಿರಿಯರಲ್ಲಿದ್ದ ಅವನ ನಿಷ್ಠೆಯು ಕಡಿಮೆಯಾಗಲಾರದು. ಪ್ರಸ್ತುತದ ಮೀರಾಬಾಯಿಯ ಕಥೆಯಲ್ಲಿ ನಮ್ಮ ವಾಚಕರು ವಿಶೇಷವಾಗಿ ಹೆಣ್ಣುಮಕ್ಕಳು ಆಕೆಯ ನಿಷ್ಠೆಯನ್ನು ಗ್ರಹಣ ಮಾಡತಕ್ಕದ್ದು. ಭಾರತ ರಮಣಿಯರಿಗೆ ಪತಿಸೇವೆಯು ಶ್ರೇಷ್ಠವಾದದ್ದು. ಭಾರತಭೂಮಿಯಲ್ಲಿ ದಂಪತಿಗಳಿಗಿದ್ದ ಪವಿತ್ರಸಂಬಂಧವು ಮಿಕ್ಕ ಯಾವ ರಾಷ್ಟ್ರಗಳಲ್ಲಿಯೂ ಕಂಡು ಬರಲಾರದು. ಅಂತೇ ಭರತ ಖಂಡವು ಪುಣ್ಯಭೂಮಿಯೆಂದೆನಿಸಿಕೊಳ್ಳುವದು. ಮಿಕ್ಕರಾಷ್ಟ್ರದವರು ಸ್ವರ್ಗವನ್ನೇ ತಂದಿರಿಸಿಕೊಂಡಿರಬಹುದು. ತಮ್ಮ ಬುದ್ಧಿವೈಭವದಿಂದ ಬೇಕಾದಂಥ ಯಾಂತ್ರಿಕ ಸುಧಾರಣೆಯನ್ನು ಹೊಂದಿರಬಹುದು. ಆದರೆ ತಮ್ಮ ಹೆಂಡರನ್ನು ತಮ್ಮ ಕೈಯಲ್ಲಿಟ್ಟುಕೊಳ್ಳುವಷ್ಟು ಅಂದರೆ ಅಖಂಡ ದಾಂಪತ್ಯಸುಖವನ್ನು ಹೊಂದುವಷ್ಟು ಪರಿಸ್ಥಿತಿಯನ್ನು ತಂದುಕೊಂಡಿಲ್ಲ. ಅದು ಆ ರಾಷ್ಟ್ರಗಳಿಗೆ ಸಿಗುವ ಸಂಭವವೂ ಇಲ್ಲ. ಆದರೆ ಇಂಥ ಅಪೂರ್ವ ಪುಣ್ಯವು ಭರತಖಂಡಕ್ಕೆ ದೊರಕಿದ್ದರೂ ಅದನ್ನು ಕಳೆದುಕೊಳ್ಳಲಿಕ್ಕೆ ನಾವು ಪ್ರಯತ್ನಿಸುವದು ದುಃಖದ ಸಂಗತಿಯಾಗಿದೆ. ಇತ್ತೀಚೆಗೆ ಸ್ತ್ರೀಯರಲ್ಲಿ ಪಾತಿವ್ರತ್ಯವು ಶಿಥಿಲವಾಗತೊಡಗಿದೆ. ಪತಿಯೇ ಪರದೈವತವೆಂಬ ಭಾವನೆಯಲ್ಲಿ ಕೊಂಚ ಚಾಂಚಲ್ಯವು ಬೆರೆತುಕೊಳ್ಳಹತ್ತಿದೆ. ಕೆಲಕೆಲವರಂತೂ ಈ ಭಾವನೆಗೆ ಸಂಪೂರ್ಣ ತಿಲಾಂಜಲಿ ಕೊಟ್ಟು ಬಿಟ್ಟಿರುವರು. ಇದು ದೇಶಕ್ಕೆ ಅಕ್ಷೇಮವೇ ಸರಿ.

ಹೀಗಾಗಲಿಕ್ಕೆ ಕಾರಣವೇನು? ಆಧುನಿಕ ಪರಿಸ್ಥಿತಿ! ಆಧುನಿಕ

ಶಿಕ್ಷಣ ಪದ್ಧತಿ!! ಸ್ತ್ರೀಯರಿಗೆ ಬೇಕಾದದ್ದನ್ನು ಕಲಿಸದೆ ಬೇಡಾದದ್ದನ್ನು ಕಲಿಸಿದ್ದರ ಫಲವಿದು! ಪಾಶ್ಚಾತ್ಯ ರಾಷ್ಟ್ರಗಳು ಎರಡೂ ಕೈಗಳಿಂದ ಈ ಫಲವನ್ನು ಅನುಭವಿಸುತ್ತಿರುವಾಗ ನಮ್ಮ ರಾಷ್ಟ್ರಕ್ಕೆ ಕೊಂಚವೂ ಬುದ್ಧಿ ಬರಬಾರದೆಂವರೆ ದುರದೃಷ್ಟವೇ ಸರಿ! ಇದರಿಂದ ಲೇಖಕನು ಸ್ತ್ರೀಶಿಕ್ಷಣ ವಿರೋಧಿಯೆಂದು ಹೆಸರಿಡಬಹುದು. ಆದರೆ ಹಾಗೆ ಹೆಸರಿಡುವ ಕಾರಣ ವಿಲ್ಲ. ಸ್ತ್ರೀಶಿಕ್ಷಣವು ಬೇಡವಲ್ಲ. ಆದರೆ ಈಗಿನ ಪದ್ಧತಿಯು ಮಾತ್ರ ನಮಗೆ ಕ್ಷೇಮಕರವಲ್ಲವೆಂಬುದಿಷ್ಟೇ ಲೇಖಕನ ಆಶಯವು. ಇರಲಿ.

ಮೀರಾಬಾಯಿಯು ಪತಿಯನ್ನು ಹೊಂದಿದಳು. ಪತಿಯೇ ಗೋವಿಂದ ಸ್ವರೂಪವೆಂಬುದು ಆಕೆಯ ಅನುಭವಕ್ಕೆ ಬಂದಿತು. ಭಾರತ ರಮಣಿಯರಿಗೆ ಪತಿಯನ್ನು ಬಿಟ್ಟು ಪರದೈವತವಿಲ್ಲೆಂದು ಸಾರುತ್ತಿರುವದರ ಪ್ರತ್ಯಕ್ಷಾನುಭವವನ್ನು ಅವಳು ಹೊಂದಿದಳು. ಆಗ ಆಕೆಯು—ಪ್ರಾಣ ಪ್ರಿಯನೇ, ಇಂದು ನಾನು ಧನ್ಯಳಾದೆನು. ನಾನು ಚಿತ್ತೂರಿನಲ್ಲಿದ್ದಾಗ ನಿಮ್ಮನ್ನು ಗೋವಿಂದನೆಂದು ಭಾವಿಸಿರಲಿಲ್ಲ. ಗೋವಿಂದನು ಬೇರೆ ನೀವು ಬೇರೆ ಎಂದು ತಿಳಿದಿದ್ದೆನು. ಈ ನನ್ನ ತಪ್ಪು ತಿಳುವಳಿಕೆಯಿಂದ ನಾನು ನಿಮಗೆ ದೇಹವನ್ನು ಮಾತ್ರ ಅರ್ಪಿಸಿದ್ದೆನಲ್ಲದೆ ಮನಸ್ಸನ್ನು ಅರ್ಪಿಸಿರಲಿಲ್ಲ. ಅಂತೆಯೇ ನಾನು ನಿಮ್ಮಿಂದ ದೂಷಣೀಯಳೆನಿಸಿಕೊಂಡೆನು. ಆದರೆ ನಿಮ್ಮ ಚರಣ ದಯದಿಂದ ಗೋವಿಂದನೇ ನಿಮ್ಮಲ್ಲಿ ನೆಲೆಸಿರುವನೆಂಬದನ್ನು ಮನವರಿಕೆ ಮಾಡಿಕೊಂಡೆನು. ಈ ವಿಗ್ರಹದಲ್ಲಿರುವ ಗೋವಿಂದನೇ ನಿಮ್ಮ ಹೃದಯದಲ್ಲಿ ವಾಸವಾಗಿರುವನು. ಚರಾಚರ ವಸ್ತುಗಳಲ್ಲಿ ಅಖಂಡವಾಗಿ ತುಂಬಿದ ಗೋವಿಂದನು ನಿಮ್ಮಲ್ಲಿ ವಾಸವಾಗಿರುವನೆಂಬ ತತ್ವವು ನನ್ನ ಲಕ್ಷದಲ್ಲಿ ಬಾರದೆ ಹೋಗಿತ್ತು. ನೀವೇ ಸಾಕ್ಷಾತ್ ಗೋವಿಂದ ಮೂರ್ತಿಗಳಿರುತ್ತೀರಿ. ನನ್ನ ಭಾಗದ ಸ್ವಾಮಿಯಿರುತ್ತೀರಿ. ನನ್ನ ಪರದೈವತವಿರುತ್ತೀರಿ. ಈ ದೇಹವೂ-ಮನಸ್ಸೂ ನಿಮ್ಮದೇ ಇರುತ್ತದೆ. ಎಂದು ನುಡಿದು ರಾಣಾನ ಚರಣಗಳಲ್ಲಿ ಮಸ್ತಕವನ್ನಿಟ್ಟಳು.

ಮೀರಾಬಾಯಿಯು ಮಹಾಭಗವದ್ಭಕ್ತಳು. ಗೋವಿಂದನನ್ನು ಪ್ರತ್ಯಕ್ಷ ಕಂಡಂಥವಳು. ಇಂಥ ಮಹಾನುಭಾವಳ ಮುಖದಿಂದ ಹೊರಟ ಈ ದಿವ್ಯವಾಣಿಯನ್ನು ಕೇಳಿ ರಾಣಾ ಕುಂಭನು ಸಂತೋಷ ಚಿತ್ತನಾದನು. ಮೀರೆಯು ಅಸಾಮಾನ್ಯ ಸ್ತ್ರೀಯಿರುವಳೆಂದು ತಿಳಿದನು. ಮೀರೆಯು ಪತಿ

ರೂಪವೇ ಭಗವಂತನದೆಂದು ಭಾವಿಸಿ, ಮನಮುಟ್ಟಿ ಸೇವೆಮಾಡಿ ಕೃತಕೃತ್ಯಳಾದಳು!!

ಮೀರೆಯು ಜಗತ್ತಿಗೆ ಆದರ್ಶಪ್ರಾಯಳಾದಳು. ಪತಿಯಲ್ಲಿ ದೈವತ ಭಾವನೆ ತಾಳಿ ತ್ರಿಕರಣ ಪೂರ್ವಕವಾಗಿ ಆತನ ಸೇವೆಮಾಡಬೇಕೆಂಬ ಅಂಶವನ್ನು ಜಗತ್ತಿಗೆ ಉಪದೇಶರೂಪವಾಗಿ ಸಾರಿದಳು. ಮೀರೆಯು ಧನ್ಯಳು! ಆಕೆಯ ಉಪದೇಶವೂ ಧನ್ಯವಾದದ್ದು. ಭಾರತ ಲಲನಾಮಣಿಗಳಿಗಿದು ಅಲಂಕಾರಪ್ರಾಯವಾದದ್ದು; ಪತಿಭಕ್ತಿಯಿಂದಲೇ ಇದುವರೆಗೆ ಅವರ ಗೌರವವು ಇತಿಹಾಸ ಪ್ರಸಿದ್ಧವಾಗಿರುವದು. ಪುರಾಣಕಾಲದಲ್ಲಿ-ಇತಿಹಾಸ ಕಾಲದಲ್ಲಿ ಪತಿಭಕ್ತಿಪರಾಯಣರಾದ ಸ್ತ್ರೀಯರು ದೇವತುಲ್ಯರಾಗಿ ಮನ್ನಣೆಯನ್ನು ಹೊಂದಿರುವರು. ಸ್ತ್ರೀಯರು ವಿದ್ಯಾವತಿಯರಾಗಿದ್ದರೂ ಪತಿವ್ರತೆಯರಾಗಬೇಕು. ಪತಿವ್ರತೆಯರಾಗದೆ ಅವರು ಬೇಕಾದಂಥ ವಿದುಷಿಯರಾದರೂ ಅವರಿಗೆ ಕವಡಿಯಷ್ಟು ಬೆಲೆಬಾರದು. ಸ್ತ್ರೀಯರಿಗೆ ಪಾತಿವ್ರತ್ಯವೇ ಮುಖ್ಯ ಜೀವಾಳವು. ಈಗಿನ ಕಾಲದಲ್ಲಿ ಈ ಜೀವಾಳವನ್ನು ರಕ್ಷಿಸಿಕೊಳ್ಳುವದಕ್ಕಾಗಿ ಸ್ತ್ರೀಯರು ಬಹಳ ಖಂಬೀರರಾಗಬೇಕಾಗಿದೆ. ಹಲವು ಜನ ಪತಿವ್ರತೆಯರ ಚರಿತ್ರಗಳನ್ನೋದಿ ಮನಸ್ಸನ್ನು ತುಂಬಾ ಬಲಪಡಿಸಿಕೊಳ್ಳಬೇಕಾಗುತ್ತದೆ. ಸ್ತ್ರೀಯರು ಏನು ಓದಿದರೂ ಪಾತಿವ್ರತ್ಯ ಬಲಪಡುವಂಥ ಗ್ರಂಥಗಳನ್ನೇ ಓದಬೇಕು. ಮನುಷ್ಯನು ಶಕ್ತಿವರ್ಧಕ ಪದಾರ್ಥಗಳನ್ನೇ ಭಕ್ಷಿಸುವಂತೆ ಸ್ತ್ರೀಯರಿಗೆ ಮಾನಸಿಕ ಆಹಾರವೆಂದರೆ ಪಾತಿವ್ರತ್ಯ ಬೆಳಿಸುವ ವಿಷಯವೇ ಸರಿ!

ಸದ್ಯದ ಹಾಗು ಭಾವೀ ಸಂತತಿಯ ತಾಯಂದಿರೂ, ಪರ್ಯಾಯದಿಂದ ರಾಷ್ಟ್ರಸೂತ್ರಧಾರಕರೂ ಆದ ನಮ್ಮ ಭಾರತ ಮಹಿಳೆಯರಿಗೆ ಈ ಬಗೆಯ ಸದ್ಬುದ್ಧಿಯು ಅಖಂಡವಾಗಿ ಪ್ರಾಪ್ತವಾಗಲೆಂದು ಜಗದೀಶನನ್ನು ಅನನ್ಯಭಾವದಿಂದ ಪ್ರಾರ್ಥಿಸಿ ಲೆಕ್ಕಣಿಕೆಗೆ ವಿರಾಮವನ್ನೀಯುವೆನು.



—ಸಂಪೂರ್ಣ—

